

# ಕನ್ನಡ ವಿಶ್ವವಿದ್ಯಾಲಯ

## ಹಂಪಿ

# "ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ"

ಕನ್ನಡ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ನಿಬಂಧಕಾರರು

**ಎಂ. ಶಕುಂತಳೆ**

ಕನ್ನಡ ಎಂ.ಫಿಲ್. ಪದವಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಮಾಲತಿ**

ಉಪನ್ಯಾಸಕರು




2006-07



# ಕನ್ನಡ ವಿಶ್ವವಿದ್ಯಾಲಯ
## ಹಂಪಿ

# "ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ"

**ಕನ್ನಡ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ**


ನಿಬಂಧಕಾರರು

**ಎಂ. ಶಕುಂತಳ**

ಕನ್ನಡ ಎಂ.ಫಿಲ್. ಪದವಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು





ಮಾರ್ಗದರ್ಶಕರು

ಡಾ. ಮಾಲತಿ

ಉಪನ್ಯಾಸಕರು


2006-07

# ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿನಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಡಾ. ಮಾಲತಿ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ "ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ" ಎಂಬ ಈ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



ನಿಬಂಧಕರ ಸಹಿ
ಶಕುಂತಳ ಎಂ

(ಎಂ.ಶಕುಂತಳ)

ಸ್ಥಳ : ಮೈಸೂರು.
ದಿನಾಂಕ: 07-08-2007

# ಮಾರ್ಗದರ್ಶಕರ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಎಂ. ಶಕುಂತಲ ಅವರು ಎಂ.ಫಿಲ್. ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **"ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ"** ಎಂಬ ಈ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೊಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ

(ಡಾ. ಮಾಲತಿ)

ಸ್ಥಳ : ಮೈಸೂರು.
ದಿನಾಂಕ: 07-08-2007

# ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ

## ಪರಿವಿಡಿ

**ಪೀಠಿಕೆ**



1. ವಿಷಯದ ಉದ್ದೇಶ ಮತ್ತು ವ್ಯಾಪ್ತಿ

2. ಸಣ್ಣಕತೆ ಬೆಳೆದು ಬಂದ ದಾರಿ ಮತ್ತು ಸ್ವರೂಪ

3. ಆಯ್ದ ಕಥೆಗಳಲ್ಲಿ ಬಡತನದ ಪರಿಕಲ್ಪನೆ

4. ಆರ್ಥಿಕ ಬಡತನದ ಪರಿಕಲ್ಪನೆ

5. ಸಾಂಸ್ಕೃತಿಕ ಬಡತನದ ಪರಿಕಲ್ಪನೆ

6. ಶೈಕ್ಷಣಿಕ ಬಡತನದ ಪರಿಕಲ್ಪನೆ

* ಸಮಾರೋಪ

* ಕಥೆಗಾರರ ಪರಿಚಯ

* ಅನುಬಂಧ

# ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ

## ಅಧ್ಯಾಯ - 1

ಸಣ್ಣಕಥೆಗಳು ಕನ್ನಡ ಸಾಹಿತ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟವಾದ ನೆಲೆ, ಬೆಲೆಯನ್ನು ಹೊಂದಿದೆ. ಕಾದಂಬರಿ, ಕಥೆ, ನಾಟಕಗಳಿಗಿಂತ ಇದು ವಸ್ತುವಿನ ಗುಣ ಆಕರ ಎಲ್ಲಾ ವಿಧದಲ್ಲೂ ಒಂದು ರೀತಿಯ ವೈಶಿಷ್ಟ್ಯವನ್ನು ಹೊಂದಿದೆ. ಸಣ್ಣ ಕಥೆಗಳು ಆಕರದಲ್ಲಿ ತುಂಬಾ ಚಿಕ್ಕದಾದವು. ಇವು ವಿಷಯವನ್ನು ನೇರವಾಗಿ ಸರಳವಾಗಿ ತಿಳಿಸುತ್ತವೆ. ಇವುಗಳ ವಿಷಯ ವಸ್ತು ಸರಳವಾಗಿರುತ್ತದೆ. ಇದರ ಬಂಧ ತುಂಬಾ ಚಿಕ್ಕದಾದರೂ ಇದರ ಔಚಿತ್ಯ ಬಹಳ ಪರಿಣಾಮಕಾರಿಯಾದುದ್ದಾಗಿದೆ ಎನ್ನಬಹುದು. ಸಣ್ಣಕಥೆಗಳು ಒಬ್ಬ ವ್ಯಕ್ತಿ ಒಂದು ವಸ್ತು, ಘಟನೆ ಯಾವುದಾದರೂ ಒಂದನ್ನು ಇಟ್ಟುಕೊಂಡು ಅದರ ಮೇಲೆ ಕಥೆ ರಚನೆ ಮಾಡುತ್ತಾರೆ. ಇವು ಒಂದಕ್ಕಿಂತ ಒಂದು ಭಿನ್ನವಾಗಿರುತ್ತವೆ. ಒಂದೊಂದು ಒಂದು ರೀತಿಯಾದ ನೀತಿಯನ್ನು ಹೇಳುವಂತದ್ದಾಗಿದೆ.

ಸಣ್ಣಕಥೆಗಳಲ್ಲಿ ಆಧುನಿಕ ಘಟ್ಟದಲ್ಲಿ ಸಾಮಾನ್ಯವಾಗಿ ಕಂಡುಬರುವಂತಹ ಸಮಸ್ಯೆಗಳನ್ನೆ ಇಲ್ಲಿ ಕಥೆಯ ವಸ್ತುವಾಗಿಸಿ ಅಭಿವ್ಯಕ್ತಿಸುವುದು ನಮ್ಮ ಕಥೆಗಾರರ ಒಂದು ಗುರಿಯಾಗಿದೆ. ಆದ್ದರಿಂದ ಅಂದಿನ ಕಾಲದಲ್ಲಿ ಸಾಮಾಜಿಕವಾಗಿ ಕಾಡುವ ಪ್ರಮುಖ ಸಮಸ್ಯೆ ಎಂದರೆ ಬಡತನ. ಈ ಬಡತನದ ಬಗ್ಗೆ ಹಲವಾರು ಕವಿಗಳು- ಕವನ, ಕಾದಂಬರಿ ನಾಟಕಗಳನ್ನು ಬರೆದಿದ್ದಾರೆ. ಆದರೆ ಸಣ್ಣಕಥೆಗಳಲ್ಲೂ ಈ ಬಡತನದ ಪರಿಕಲ್ಪನೆ ಬಹಳಷ್ಟು ಕಥೆಗಾರರ ವಿಷಯವಸ್ತುವಾಗಿದೆ. ಆದ್ದರಿಂದ ಹಲವಾರು ಕಥೆಗಾರರಲ್ಲಿ ಕೆಲವು ಆಯ್ದ ಕಥೆಗಾರರ ಕಥೆಗಳಲ್ಲಿ ಬಡತನದ ಪರಿಕಲ್ಪನೆ ಅವರ ಕಥೆಗಳಲ್ಲಿ ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ನೋಡುವ ಪ್ರಯತ್ನವನ್ನು ಮಾಡಲಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಲವಾರು ಕಥೆಗಾರರು ತಮ್ಮ ಕಥೆಗಳ ವಿಷಯ ವಸ್ತುವಾಗಿ ಬಡತನವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಅವುಗಳಲ್ಲಿ ಕೆಲವೊಂದು ಕಥೆಗಾರರ ಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಅವರಲ್ಲಿ ಪ್ರಮುಖವಾಗಿ ಆಯ್ಕೆ ಮಾಡಿಕೊಂಡ ಕಥೆಗಾರರೆಂದರೆ ಕಟ್ಟೀಮನಿ,

ನಿರಂಜನ, ಲಂಕೇಶ್, ದೇವನೂರು ಮಹಾದೇವ, ಕುಂ. ವೀರಭದ್ರಪ್ಪ, ಶಾಂತಿನಾಥ ದೇಸಾಯಿ, ಚಿತ್ತಾಲರು, ಸಾರಾ, ವೈದೇಹಿ ಮುಂತಾದವರ ಕಥೆಗಳಲ್ಲಿ ಅಭಿವ್ಯಕ್ತಗೊಂಡಿರುವ ಬಡತನದ ಪರಿಕಲ್ಪನೆಯನ್ನು ಇಲ್ಲಿ ಕಾಣಬಹುದಾಗಿದೆ. ಈ ಕಥೆಗಳಲ್ಲಿ ಕೇವಲ ಆರ್ಥಿಕ ಬಡತನದ ಜೊತೆಯಲ್ಲೆ ಸಾಂಸ್ಕೃತಿಕ ಬಡತನ ಮತ್ತು ಶೈಕ್ಷಣಿಕ ಬಡತನ ಎಂಬ ಎರಡು ಅಂಶಗಳನ್ನು ಇಟ್ಟುಕೊಂಡು ಕಥೆಗಳ ಸಮಗ್ರ ಅಧ್ಯಯನವನ್ನು ಇಲ್ಲಿ ಕಾಣಲಾಗುತ್ತದೆ. ಬಡತನ ಎಂಬುದಕ್ಕೆ ಸಾಮಾನ್ಯವಾಗಿ ಆರ್ಥಿಕ ಬಡತನ ಎಂಬುದೊಂದೇ ಎಲ್ಲರ ಗುರಿಯಾಗಿರುತ್ತದೆ. ಆದರೆ ಸಾಕಷ್ಟು ಸಾಂಸ್ಕೃತಿಕ, ಶೈಕ್ಷಣಿಕ ಅಂಶಗಳನ್ನು ಬಡತನ ಒಳಗೊಂಡಿರುತ್ತದೆ. ಭೌತಿಕವಾಗಿ ಗೋಚರವಾಗುವುದು ಈ ಆರ್ಥಿಕ ಬಡತನವೊಂದೇ. ಅಭೌತಿಕ ರೂಪದಲ್ಲಿ ಅದರ ಪೂರಕವಾದ ಅಂಶದಂತೆ ಕಾಣುವುದು ಸಂಸ್ಕೃತಿ ಶೈಕ್ಷಣಿಕತೆ ಎಂಬುದೇ ಆಗಿದೆ. ಆದ್ದರಿಂದ ಇಲ್ಲಿ ಈ ಮೂರು ಅಂಶಗಳು ಬಡತನದ ಪರಿಕಲ್ಪನೆಯನ್ನು ಸಾಕಷ್ಟು ಮಟ್ಟಿಗೆ ಅಧ್ಯಯನ ಮಾಡಲು ಅನುಕೂಲವಾಗಿದೆ. ಆದ್ದರಿಂದಲೇ ಇಲ್ಲಿ ಇವುಗಳನ್ನು ಅಧ್ಯಯನ ವಸ್ತುವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯಕ್ಕೆ ಸಣ್ಣಕಥೆಗಳು ಒಂದು ರೀತಿಯ ಉತ್ತಮವಾದ ಕೊಡುಗೆಗಳು ಎಂದು ಹೇಳಬಹುದಾಗಿದೆ.

ಆಧುನಿಕ ಕಾಲದಲ್ಲಿ ಹೆಚ್ಚಾಗಿ ಕಂಡುಬರುತ್ತಿರುವ ಸಾಮಾಜಿಕ ಅಂತರ ಬಡವ, ಶ್ರೀಮಂತ ಎಂಬುದು ಪ್ರತ್ಯಕ್ಷವಾಗಿ ಕಾಣುವ ಸತ್ಯವಾಗಿ ಇಲ್ಲಿ ಗೋಚರವಾಗಿದೆ. ಇವುಗಳಿಗೆಲ್ಲಾ ಬದಲಾವಣೆ ತರುವಲ್ಲಿ ನಮ್ಮ ಸಮಾಜವು ಪ್ರಯತ್ನಪಟ್ಟರೂ ಅದು ಫಲಕಾರಿ ಆಗದೇ ಇರುವುದನ್ನು ಅದಕ್ಕೆ ಮುಖ್ಯ ಕಾರಣವಾದ ಇಂದಿನ ಸಮಾಜದಲ್ಲಿನ ಪರಿಸ್ಥಿತಿಯ ಅಧ್ಯಯನವನ್ನು ನಾವು ಇಲ್ಲಿ ನೋಡಬಹುದಾಗಿದೆ. ಇಂತಹ ಪರಿಸ್ಥಿತಿಯು ಅಂದಿನ ಸಾಮಾಜಿಕ ವಾತಾವರಣವನ್ನೆ ಹದಗೆಡಿಸಿತು. ಇದು ಹಲವಾರು ಮಾನವೀಯ ಅಂಶವನ್ನು ಒಳಗೊಂಡ ಕೆಲವರಲ್ಲಿ ಇದಕ್ಕೆ ವಿರುದ್ಧವಾದ ಪ್ರತಿಕ್ರಿಯೆ ನೀಡುವಂತಹ ಅಂಶಗಳು ಕಂಡುಬಂದವು. ಅಂತಹವರಲ್ಲಿ ಹಲವಾರು ಕಥೆಗಾರರು ಇಂತಹ ಹಲವಾರು ಸಮಸ್ಯೆಗಳನ್ನು ಅಭಿವ್ಯಕ್ತಿಸುವಲ್ಲಿ ಜನರಿಗೆ ಸುಲಭವಾಗಿ ಅರ್ಥವಾಗುವಂತಹ ಪ್ರಕಾರವನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಎದುರಾಗುವಂತಹ ಸಮಸ್ಯೆಗಳು ಸರ್ವೇಸಾಮಾನ್ಯ. ಇಂತಹ ಸಂದರ್ಭದಲ್ಲಿ ಸಣ್ಣಕಥೆಯು

ಜನರಿಗೆ ಅತ್ಯಂತ ಸಮೀಪವಾದಂತಹ ಪ್ರಕಾರ ಈ ಪ್ರಕಾರವನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಹಲವಾರು ಕಥೆಗಾರರು ಮುಂದಾದರು. ಸಮಾಜದಲ್ಲಿ ಸುಧಾರಣೆ ತರುವ ಉದ್ದೇಶದಿಂದ ಹಾಗೂ ಅದಕ್ಕೆ ಸೂಕ್ತ ಪರಿಹಾರ ಕಂಡುಕೊಳ್ಳುವ ಉದ್ದೇಶವನ್ನಿಟ್ಟುಕೊಂಡು ಹಲವಾರು ಕಥೆಗಾರರು ಕಥೆಯನ್ನು ರಚಿಸಿದರು. ಈ ಕಥೆಗಳಲ್ಲಿ ಹಲವಾರು ವಿಷಯಗಳನ್ನು ನೇರವಾಗಿ ಅತ್ಯಂತ ಸರಳ ಭಾಷೆಯಲ್ಲಿ ಈ ಪ್ರಕಾರದಲ್ಲಿ ತಮ್ಮ ಅನುಭವಗಳು, ಉದ್ದೇಶಗಳನ್ನು ಅಭಿವ್ಯಕ್ತಿಸುವಲ್ಲಿ ಸಫಲರಾಗುತ್ತಾರೆ. ಸಣ್ಣಕಥೆಯಲ್ಲಿ ಹಲವಾರು ರೀತಿಯ ಅಂಶಗಳನ್ನು ಅಭಿವ್ಯಕ್ತಿಸುವ ತುಂಬಾ ಮಹತ್ವದ ಪ್ರಕಾರವಾಗಿದೆ. ಹಲವಾರು ರೀತಿಯ ಅಂಶವನ್ನು ಅಥವಾ ಔಚಿತ್ಯ ನೀತಿಯನ್ನು ತನ್ನ ಉದ್ದೇಶವನ್ನು ವಿವಿಧ ಕಥೆಗಳ ಮೂಲಕ ತಿಳಿಸುವಲ್ಲಿ ಇವು ಪ್ರಮುಖವಾಗಿವೆ. ಆದರೆ ಕಾದಂಬರಿಯು ಇಡೀ ಕಾದಂಬರಿ ಓದಿದ ನಂತರದಲ್ಲಿ ಒಂದು ನೀತಿ ಅಥವಾ ಅದರ ಉದ್ದೇಶ ನಮಗೆ ಗೊತ್ತಾಗುತ್ತದೆ.

ಸಣ್ಣಕಥೆಗಳಲ್ಲಿ ಬಡತನದ ಬಗ್ಗೆ ಹಲವಾರು ಕಥೆಗಳು ಕಂಡುಬಂದರೂ ಅದರಲ್ಲಿ ಹೆಚ್ಚಾಗಿ ವಿಭಿನ್ನ ನೆಲೆಗಳಿಂದ ಆಧುನಿಕ ಕಥೆಗಾರರೂ ಆಗಿದ್ದಾರೆ. ಇದಕ್ಕೆ ಅಂದಿನ ಸಾಮಾಜಿಕ ವ್ಯವಸ್ಥೆ ಬೀರಿದ ಪರಿಣಾಮ ಎಂದು ಗುರುತಿಸಬಹುದಾಗಿದೆ. ಆದರೂ ಹಲವಾರು ಸಣ್ಣಕಥೆಗಳು ಈ ಉದ್ದೇಶವನ್ನೆ ಇಟ್ಟುಕೊಂಡು ಕಥೆಯನ್ನು ರಚಿಸಿದ್ದಾರೆ. ಅವರಲ್ಲಿ ಕೆಲವೊಂದು ಕಥೆಗಾರರ ಕಥೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಹಲವಾರು ಕಥೆಗಾರರು ಬಂದಿರುವುದರಿಂದ ಕಥೆಗಾರರ ಪರಿಚಯವನ್ನು ಒಂದು ಘಟಕದಲ್ಲಿ ಪರಿಚಯಿಸಲಾಗಿದೆ. ಅವುಗಳನ್ನು ಒಂದು ಚೌಕಟ್ಟಿನಲ್ಲಿ ಅಧ್ಯಯನ ಮಾಡಲಾಗಿದೆ.

ಸಣ್ಣಕಥೆಗಳಲ್ಲಿ ಹಲವಾರು ಕಥೆಗಳು ಬಡತನದ ಪರಿಕಲ್ಪನೆಯ ಬಗ್ಗೆ ತಿಳಿಸಿದ್ದಾರೆ. ಅವುಗಳು ಅದನ್ನು ವ್ಯಕ್ತಪಡಿಸುವಾಗ ಬಡತನಕ್ಕೆ ಕಾರಣವಾದ ಮೂಲ ಅಂಶವನ್ನು ಉದ್ದೇಶವಾಗಿಟ್ಟುಕೊಂಡು ಹಲವಾರು ಕಥೆಗಳು ಬಂದಿವೆ. ಅವುಗಳು ಅಧ್ಯಯನ ಪ್ರಮುಖ ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

ಬಡತನದ ಬಗ್ಗೆ ಸಣ್ಣ ಕಥೆಗಳಲ್ಲಿ ಅದರ ಒಟ್ಟು ಉದ್ದೇಶವನ್ನು ವ್ಯಕ್ತಪಡಿಸುವಲ್ಲಿ ಸಣ್ಣಕಥೆಗಳ ಪಾತ್ರವನ್ನು ನಾವು ಕಾಣಬಹುದಾಗಿದೆ. ಇಲ್ಲಿ ಬಡತನದ ಪರಿಕಲ್ಪನೆ ಮಾತ್ರ ವ್ಯಕ್ತವಾಗಿದೆ. ಆದರೆ

ಅದಕ್ಕೆ ಯಾವುದೇ ರೀತಿಯ ಪರಿಹಾರ ಹೋರಾಟಗಳು ಕಂಡುಬರುವುದಿಲ್ಲ. ನೇರವಾಗಿ ಯಾವುದೇ ರೀತಿಯ ಪ್ರತಿಕ್ರಿಯೆಯನ್ನು ಇಲ್ಲಿ ನೀಡಿಲ್ಲ. ಅದಕ್ಕೆ ಪರಿಹಾರವನ್ನು ಅದು ಓದುಗರಿಗೆ ಬಿಟ್ಟುಕೊಟ್ಟಿದೆ. ಅಂದಿನ ಸಾಮಾಜಿಕ ಪರಿಸ್ಥಿತಿಯನ್ನು ಬಡತನದ ಪರಿಕಲ್ಪನೆಯನ್ನು ಮಾತ್ರ ಸಹೃದಯನಿಗೆ ಎಂದು ಮಾಡುತ್ತದೆ. ಅದರ ಹಿನ್ನೆಲೆಯನ್ನು ಸಹೃದಯನೇ ಊಹಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದ ಇವುಗಳ ಅಧ್ಯಯನವನ್ನು ವಿವಿಧ ಘಟ್ಟಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಸಾಮಾನ್ಯವಾಗಿ ಬಡತನದ ಪರಿಕಲ್ಪನೆ ಎಂದರೆ ಆರ್ಥಿಕ ಬಡತನದ ಬಗ್ಗೆ ಹಲವಾರು ಪ್ರಬಂಧಗಳು ಬಂದಿವೆ. ಆದರೆ ಅದರಲ್ಲೆ ಒಂದು ವಿಶಿಷ್ಟವಾದ ಅಧ್ಯಯನವನ್ನು ಇಲ್ಲಿ ಮಾಡಬೇಕೆಂದು ಈ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಬಡತನದ ಜೊತೆಯಲ್ಲೆ ಸಮಾಜದಲ್ಲಿನ ಆರ್ಥಿಕ ಬಡತನ, ಜನರ ಮೇಲೆ ಯಾವ ಯಾವ ಪ್ರಭಾವವನ್ನು ಬೀರಿದೆ ಎಂಬುದನ್ನು ತಿಳಿಯಲು ಈ ವಿಷಯವನ್ನು ಈ ಪ್ರಬಂಧದಲ್ಲಿ ಸೇರಿಸಲಾಗಿದೆ. ಜೊತೆಯಲ್ಲಿ ಇಲ್ಲಿನ ಸಾಂಸ್ಕೃತಿಕ ಬಡತನ ಎಂಬ ವಿಶಿಷ್ಟವಾದ ವಿಷಯವನ್ನು ಇಲ್ಲಿ ಸೇರಿಸಲಾಗಿದೆ.

ಭಾರತವು ಹಲವಾರು ಸಂಸ್ಕೃತಿಯನ್ನು ಒಳಗೊಂಡಿದೆ. ಇಲ್ಲಿ ಹಲವಾರು ಸಂಸ್ಕೃತಿಯ ಜನರು ಕಂಡುಬರುತ್ತಾರೆ. ಯಾವುದೇ ಜನರಿಗೂ ಅವರದೇ ಆದಂತಹ ಒಂದು ಸಂಸ್ಕೃತಿ, ಭಾಷೆ, ನೆಲೆ ಇದ್ದೇ ಇದೆ. ಈ ಗುರಿಯನ್ನಿಟ್ಟುಕೊಂಡು ಹಲವು ಸಂಸ್ಕೃತಿಗಳ ನಡುವೆ ಘರ್ಷಣೆಗಳು ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ಸಾಮಾನ್ಯವಾಗಿ ಪರ-ವಿರೋಧವಾದ ಗುಂಪುಗಳು ಹುಟ್ಟಿಕೊಳ್ಳುತ್ತದೆ. ಈ ಗುಂಪುಗಳಲ್ಲಿ ಬಲಿಷ್ಠವಾದ ಗುಂಪು ತನ್ನ ಪ್ರಾಬಲ್ಯದಿಂದಾಗಿ ತನ್ನ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಹವಣಿಸುತ್ತದೆ. ಇಂತಹ ಸಂದರ್ಭದಲ್ಲಿ ತುಳಿತಕ್ಕೊಳಗಾದಂತಹ ಸಂಸ್ಕೃತಿಯು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸಂದರ್ಭವು ಎದುರಾಗುತ್ತದೆ. ಅಂತಹ ವೇಳೆಯಲ್ಲಿ ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಅಂದಿನ ಸಮಾಜದ ಜನರು ಪರಿಶ್ರಮಪಡಬೇಕಾಗುತ್ತದೆ. ಹೀಗೆ ತುಳಿತಕ್ಕೆ ಒಳಗಾದ ಸಂಸ್ಕೃತಿಯ ಚಿತ್ರಣದ ಬಗ್ಗೆ ಹಲವಾರು ಆಧುನಿಕ ಕಥೆಗಳು ಹೊರಬಂದಿವೆ. ಅವುಗಳಲ್ಲಿ ಕೆಲವೊಂದು ಕಥೆಗಳನ್ನು ಉದಾಹರಣೆಯಾಗಿ ಇಟ್ಟುಕೊಂಡು ಸಾಂಸ್ಕೃತಿಕ ಬಡತನದ ಬಗ್ಗೆ ಕೆಲವೊಂದು ಅಧ್ಯಯನವನ್ನು ಮಾಡಲಾಗಿದೆ.

ಅನಂತರದಲ್ಲಿ ಈ ಬಡತನಕ್ಕೆ ಕೆಲವೊಮ್ಮೆ ಶೈಕ್ಷಣಿಕ ತೊಂದರೆಗಳು ಸಾಮಾನ್ಯವಾಗಿ ಕಂಡುಬರುವ ಪ್ರಮುಖ ಅಂಶವಾಗಿರುತ್ತದೆ. ಶೈಕ್ಷಣಿಕ ಬಡತನದಿಂದಾಗಿ ಕೆಲವೊಮ್ಮೆ ದುರಂತವಾದ ಪರಿಸ್ಥಿತಿಯನ್ನು ಎದುರಿಸುವ ಸನ್ನಿವೇಶಗಳು ನಾವು ದಿನನಿತ್ಯ ಕಾಣುವ ಸಮಸ್ಯೆಗಳಾಗಿಯೇ ಗೋಚರಿಸುತ್ತವೆ. ಶೈಕ್ಷಣಿಕ ಕೊರತೆಯಿಂದಾಗಿ ಹಲವಾರು ಶೋಷಣೆಗೆ ಒಳಗಾಗುವ ಸಂದರ್ಭಗಳು ಎದುರಾಗುತ್ತವೆ. ಶಿಕ್ಷಣದಿಂದಾಗಿ ಜ್ಞಾನದ ದೀಪದಿಂದಾಗಿ ಬದುಕು ಸುಂದರವಾಗಿರಲು ಸಾಧ್ಯವಾಗುತ್ತದೆ. ಇಲ್ಲದೇ ಹೋದರೆ ದಂಡಿ ಹೇಳಿರುವಂತೆ ಜ್ಞಾನವೆಂಬ ಜ್ಯೋತಿ ಜೀವನದುದ್ದಕ್ಕೂ ಬೆಳಗದೆ ಹೋದರೆ ಇಡೀ ಬದುಕೆ ಕತ್ತಲು ಎಂಬಂತೆ ಜ್ಞಾನಕ್ಕೆ ಹೆಚ್ಚು ಒತ್ತು ನೀಡುವುದರ ಮೂಲಕ ಸಾಮಾಜಿಕ ಸುಧಾರಣೆಯನ್ನು ಮಾಡಬಹುದಾಗಿದೆ. ಆದರೆ ಈ ಶಿಕ್ಷಣ ಎಂಬುದು ಇಂದು ಮಾರಾಟ ವಸ್ತುವಾಗಿದೆ. ಹಣವಂತರು ಕೊಂಡು ಕೊಂಡು ಭೋಗಿಸುವಂತಹ ವಸ್ತುವಾಗಿದೆ. ಇದರಿಂದ ವಂಚಿತರಾಗಿ ಹಲವಾರು ಬಡಕುಟುಂಬಗಳಾಗಿರುವುದನ್ನು ನಾವು ಕಾಣಬಹುದಾಗಿದೆ. ಆದ್ದರಿಂದ ಶೈಕ್ಷಣಿಕ ಕೊರತೆಯು ಬಡತನದ ಮೇಲೆ ಯಾವ ರೀತಿಯಲ್ಲಿ ಸಂಬಂಧ ಹೊಂದಿದೆ ಎಂಬುದನ್ನು ಕೆಲವೊಂದು ಕಥೆಗಳಲ್ಲಿ ತಿಳಿಸಿದ್ದಾರೆ.

ಒಟ್ಟಿನಲ್ಲಿ ಕನ್ನಡ ಆಧುನಿಕ ಸಾಹಿತ್ಯದಲ್ಲಿ ಆಯ್ದ ಸಣ್ಣಕಥೆಗಳಲ್ಲಿ ಬಡತನದ ಪರಿಕಲ್ಪನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಬಂಧ ರಚಿಸಲಾಗಿದೆ. ಸಣ್ಣಕಥೆಯು ಓದುಗರಿಗೆ ಅತ್ಯಂತ ಪ್ರಿಯವಾದ ಪ್ರಕಾರ ಎಂದು ಹೇಳಬಹುದಾಗಿದೆ. ಆದ್ದರಿಂದ ಸಣ್ಣಕಥೆಗಳನ್ನು ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದಾಗಿ ಆಧುನಿಕ ಸಣ್ಣಕಥೆಗಳನ್ನು ಆಯ್ಕೆಯ ವಿಷಯವಾಗಿ ಇಟ್ಟುಕೊಂಡಿದ್ದೇನೆ. ಆದ್ದರಿಂದ ಇಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿಯ ಜೊತೆಯಲ್ಲಿ ಸಣ್ಣಕಥೆಗಳ ಸ್ವರೂಪ ಅವುಗಳಲ್ಲಿ ಬಡತನದ ಪರಿಕಲ್ಪನೆ ಹೇಗೆ ವ್ಯಕ್ತವಾಗಿದೆ ಹಾಗೂ ಆರ್ಥಿಕ ಬಡತನ, ಸಾಂಸ್ಕೃತಿಕ, ಶೈಕ್ಷಣಿಕ ಬಡತನ ಹೇಗೆ ಸಣ್ಣಕತೆಗಳಲ್ಲಿ ವ್ಯಕ್ತವಾಗಿದೆ ಎಂಬುದನ್ನು ವಿವರಿಸುತ್ತಾ ಕೊನೆಯಲ್ಲಿ ಉಪಸಂಹಾರವನ್ನು ತಿಳಿಸಲಾಗಿದೆ. ಹೀಗೆ ಈ ಪ್ರಬಂಧವನ್ನು ಸಾದರಪಡಿಸಲಾಗಿದೆ. ಇದಕ್ಕೆ ನನ್ನ ಮಾರ್ಗದರ್ಶಕರು ಹೆಚ್ಚಿನ ಪ್ರೋತ್ಸಾಹ ನೀಡಿದ್ದಾರೆ ಎಂಬುದನ್ನು ಇಲ್ಲಿ ವ್ಯಕ್ತಪಡಿಸಲು ಇಚ್ಛಿಸುತ್ತೇನೆ.

## ಅಧ್ಯಾಯ - 2

## ಸಣ್ಣಕತೆ ಬೆಳೆದು ಬಂದ ದಾರಿ

**ಕ**ನ್ನಡ ಸಾಹಿತ್ಯದಲ್ಲಿ ಕಾದಂಬರಿಯ ಅನಂತರದ ಜನಪ್ರಿಯತೆಯ ಸ್ಥಾನವನ್ನು ಸಣ್ಣಕತೆಯು ಪಡೆದುಕೊಂಡಿದೆ ಎಂಬುದಾಗಿ ಹೇಳಬಹುದು. ದಿನಪತ್ರಿಕೆ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಸಣ್ಣಕತೆಗಳು ಹುಟ್ಟುತ್ತಲೇ ಇವೆ. ಯಾವುದೇ ಕಾಲಘಟ್ಟದಲ್ಲಾದರೂ ಸಣ್ಣಕತೆಗಳು ಸಮೃದ್ಧಿಯನ್ನು ಹೊಂದಿವೆ. ಮೊದಮೊದಲು ಈ ಹೊಸ ಸಾಹಿತ್ಯ ಪ್ರಕಾರದ ಬಗ್ಗೆ ನಮ್ಮ ಲೇಖಕರು ಬಹಳ ಉತ್ಸಾಹವನ್ನು ತಳೆದಿದ್ದರು. ಇದರಿಂದ 1920 ಹಾಗೂ 1930ರ ಕಾಲದಲ್ಲಿ ಬಂದ ಕಥೆಗಳಲ್ಲಿ ಕಥೆಗಾರರ ವಿಶಿಷ್ಟ ಕ್ರಮವನ್ನು ಕಾಣಬಹುದಾಗಿದೆ. ವಿಷಯದ ಆಯ್ಕೆ ಅದರ ನಿರೂಪಣೆಯಲ್ಲಿ ತುಂಬಾ ಚಿಂತನೆ ಮಾಡಿರಬೇಕಾಗುತ್ತದೆ. ಆದರೆ ಇಂದಿನ ಕತೆಗಳಲ್ಲಿ ಅಂತಹ ಅಂಶಗಳು ವಿರಳವಾಗಿವೆ ಎನ್ನಬಹುದು. ಶ್ರೀನಿವಾಸರಂತೆ ಸಣ್ಣಕತೆಯನ್ನೇ ತಮ್ಮ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಂಡ ಕತೆಗಾರರು ಅನಂತರ ಕಂಡುಬರಲಿಲ್ಲ. ಈಗ ಪ್ರಕಟವಾಗುವ ಕಥೆಗಳಲ್ಲಿ ಅಂತಹ ಸತ್ವವಿರುವಂತೆ ಕಂಡುಬರುವುದಿಲ್ಲ.

ಸಣ್ಣಕಥೆ ಕಥನದ ಒಂದು ಪ್ರಕಾರವಾದುದರಿಂದ ಹಾಗೂ ಕಥನದ ಚರ್ಚೆಯ ನೆಲೆಯಿಂದಲೇ ಸಣ್ಣಕಥೆ ಸ್ವರೂಪ ಜಿಜ್ಞಾಸೆಗೆ ಹೊರಡುವುದು ಸಯುಕ್ತಿಕವೆನಿಸಿದುದರಿಂದ ಕಥನ ಸಾಹಿತ್ಯದ ವ್ಯಾಪ್ತಿ ಹಾಗೂ ಕಥನದ ವ್ಯಾಖ್ಯೆಗಳನ್ನು ವಿವರಿಸಬೇಕಾಗಿದೆ. ಸಣ್ಣಕತೆ ಎಂಬ ಪದ ಪ್ರಯೋಗ ಇಂಗ್ಲೀಷ್‌ನ Short Storyಯ ಭಾಷಾಂತರವಾಗಿಯೇ ಕನ್ನಡದಲ್ಲಿ ಪ್ರಚಲಿತವಾಗಿದೆ. ಮರಾಠಿಯಲ್ಲಿ ಸಣ್ಣಕತೆಯನ್ನು 'ಕಥಾ' ಎಂದೇ ಗುರುತಿಸಲಾಗುತ್ತದೆ. ಆದರೆ Short ಶಬ್ದದ ಅರ್ಥ ವ್ಯಾಪ್ತಿಗೂ ಸಣ್ಣ ಪದದ ಅರ್ಥ ವ್ಯಾಪ್ತಿಗೂ ಅಂತರಗಳಿವೆ.

"Oxford Dictionary" 'Short' ಪದಕ್ಕೆ ಕೊಡುವ ಪ್ರಧಾನ ಅರ್ಥ ಹೀಗಿದೆ:

1. Measuring little from end to end in space or time.

2. Not reaching the usual stated or required.

3. Saying very little or saying much in few words short storyಗೆ ಈ ಅರ್ಥಗಳನ್ನು ಅನ್ವಯಿಸಿದಾಗ ಸೂಚಿತವಾಗುವ ಅಂಶಗಳೆಂದರೆ:

೧. ಸಣ್ಣಕತೆ ಸ್ಥಳ, ಕಾಲಗಳನ್ನು ತೀರ ಚಿಕ್ಕ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳುತ್ತದೆ.

೨. ಅದು ಅಪೇಕ್ಷಿತ ಅಥವಾ ನಿರೀಕ್ಷಕ ಮಿತಿಗಳನ್ನು ತಲುಪುವುದಿಲ್ಲ ಹಾಗೂ

೩. ಅದು ಹೇಳುವುದು ಬಹಳ ಕಡಿಮೆ ಅಥವಾ ಸ್ವಲ್ಪದರಲ್ಲಿಯೇ ಅದು ಬಹಳಷ್ಟನ್ನು ಹೇಳುತ್ತದೆ. ಕನ್ನಡದಲ್ಲಿ ಸಣ್ಣ ಎನ್ನುವ ಪದಕ್ಕೆ ಕಿಟ್ಟೆಲ್ ಡಿಕ್ಸನರಿಯಲ್ಲಿ ಈ ಅರ್ಥಗಳಿವೆ. Small, little, tiny, minute, thin, delicate, slender, narrow, insignificant ಇವುಗಳು small ಎಂಬುದೊಂದು ಬಿಟ್ಟರೆ ಯಾವ ಅರ್ಥವು ಸಣ್ಣ ಕತೆಗೆ ಅನ್ವಯಿಸುವುದಿಲ್ಲ. Short ಎಂದಾಗ long ಶಬ್ದ ಸೂಚಕವಾದಂತೆ ಸಣ್ಣ ಎಂಬುದು 'ದೊಡ್ಡ' ಎಂಬುದರ ವಿರುದ್ಧಾರ್ಥವಾಗಿದೆ. ಠಾಗೋರರ ಕವಿತೆಗಳ ಬಗ್ಗೆ ಇಂತ ಸಮಸ್ಯೆಯನ್ನೆದುರಿಸಿದ ವಿಲಿಯಂ ರ್‍ಯಾಡಿಸ್ short ಪದಕ್ಕಿಂತ brief ಎನ್ನುವ ಪದ ಹೆಚ್ಚು ಸಮರ್ಪಕವಾದುದು ಎಂದು ಅಭಿಪ್ರಾಯಪಡುತ್ತಾನೆ. 'What is short story? ಎಂಬ ತಮ್ಮ ಲೇಖನದಲ್ಲಿ ಅಲೆಕ್ಸಿ, ಟಾಲ್‌ಸ್ಟಾಯ್ Brevityಯಂಥ ಪದಗಳನ್ನು ಬಳಸಿರುವುದನ್ನು ಲಕ್ಷಿಸಬಹುದು." *

ಒಟ್ಟಾರೆ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿಯ ನಂತರ ಸಣ್ಣಕಥೆ ಜನಪ್ರಿಯವಾದ ಮತ್ತು ಮಹತ್ತರವಾದ ಸಾಹಿತ್ಯವಾಹಿನಿಯಾಗಿದೆ. ಕಾದಂಬರಿಯಂತೆ ಸಣ್ಣಕಥೆಯೂ ವಿಶಾಲವಾದ ಉದಾರವಾದ ವಾಸ್ತವತೆ ಮತ್ತು ಅದರಾಚೆಗಿನ ಪ್ರಪಂಚವನ್ನೆಲ್ಲ ತನ್ನ ತೆಕ್ಕೆಗೆ ತಂದುಕೊಳ್ಳುವ ಪರಿಮಿತವಾದ ಗದ್ಯ ನಿರೂಪಣೆಯಾಗಿದೆ.

---

*. *ಜಿ.ಎಸ್. ಆಮೂರರ ಕನ್ನಡ ಕಥನ ಸಾಹಿತ್ಯ ; ಸಣ್ಣ ಕತೆ, ಪು.ಸಂ. 20*

ದಿ. ಪಂಜೆ ಮಂಗೇಶರಾಯರು ಸಣ್ಣಕತೆಗೆ ಮೊದಲಿಗರಾಗಿದ್ದಾರೆ. ಮೊದಲಿಗೆ ಬಂದ ಕಥೆಯಾದ್ದರಿಂದ ಇವುಗಳಲ್ಲಿ ಅಂಥಸತ್ತ್ವವೇನು ಇಲ್ಲ. ಅವರ ಅನುಭವದ ಕಥನವಾಗಿ ಇವು ಕಂಡುಬರುತ್ತವೆ. ಸಣ್ಣಕತೆಯ ಸ್ವರೂಪದ ದೃಷ್ಟಿಯಿಂದ ನೋಡಿದಾಗ ಇವು ಮಹತ್ವದವಾಗಿ ತೋರದಿದ್ದರೂ ಪಂಜೆಯವರ ಬರವಣಿಗೆಯ ಕೆಲ ವಿಶೇಷ ಗುಣಗಳು ಇಲ್ಲಿ ರೂಪು ಪಡೆದಿವೆ. ಇವರ ಅನಂತರ ಪ್ರಮುಖ ಕಥೆಗಾರರಾಗಿ ದಿ. ಕೆರೂರು ವಾಸುದೇವಚಾರ್ಯರು ಕೆರೂರು ಸಾಹಿತ್ಯ ಚಳುವಳಿ ಪತ್ರಿಕೆಗಳಾದ 'ಸಚಿತ್ರ ಭಾರತ' ಹಾಗೂ 'ಶುಭೋದಯ' ಸಂಪಾದಕರಾಗಿ ಕೆಲಸ ಮಾಡಿದರು. ಇವರ ಕತೆಗಳಲ್ಲಿ ಐತಿಹಾಸಿಕ, ಸಾಮಾಜಿಕ ಕತೆಗಳನ್ನು ಹಾಗೂ ಪತ್ತೆದಾರಿ ಕತೆಗಳನ್ನು ರಚಿಸಿದ್ದಾರೆ.

ಮರಾಠಿಯ ಸಂಪೂರ್ಣ ಕತೆಯ ಅನುಕರಣೆಯನ್ನು ಇವರ ಕತೆಯಲ್ಲಿ ಕಾಣಬಹುದಾಗಿದೆ. 19ನೇ ಕೊನೆ 20ನೇ ಶತಮಾನದ ಆರಂಭದಲ್ಲಿ ಈ ರೀತಿಯ ಕತೆಗಳನ್ನು ಕಾಣಬಹುದಾಗಿದೆ. ಇಂದಿಗೂ ಜನಪ್ರಿಯವಾದ 'ಮಲ್ಲೇಶಿಯ ನಲ್ಲೆಯರು' ಎಂಬ ಕತೆ ಉತ್ತಮವಾದ ಹಾಸ್ಯನಾಟಕಕ್ಕಿರುವ ಒಂದು ಕಥಾ ವಸ್ತು ಇಲ್ಲಿದೆಯಲ್ಲದೆ 'ಗೋಲ್ಡ್‌ಸ್ಮಿತ್' ಹಾಗೂ ಡಿಕೆನ್ಸರ ವಿನೋದದ ರುಚಿಯನ್ನು ಅನುಭವಿಸಬಹುದಾಗಿದೆ.

ಶ್ರೀನಿವಾಸರ ಕತೆಗಳನ್ನು ಕಾಣುವ ತನಕ 'ಸಚಿತ್ರ ಭಾರತ' ಹಾಗೂ ಸದ್ಬೋಧ ಚಂದ್ರಿಕೆಯಂಥ ಪತ್ರಿಕೆಗಳಲ್ಲಿ ನಾವು ಸಣ್ಣಕತೆಯನ್ನು ಕಾಣಬಹುದಾಗಿದೆ. ಸಣ್ಣಕತೆ ಕ್ಷೇತ್ರದಲ್ಲಿ ಶ್ರೀನಿವಾಸರ ಹೆಸರು ಚಿರಸ್ಮರಣೀಯದುದ್ದಾಗಿದೆ. ಅವರ ರಂಗಪ್ಪನ ಕತೆಗಳು ಸಾಹಿತ್ಯದಲ್ಲಿ ಒಂದು ಹೊಸ ಲೋಕವನ್ನು ತೆರೆದು ದೋರಿದವು. ಇವರ ಕೃತಿಗಳು ವಾಸ್ತವವಾಗಿ ನಿರೂಪಿತವಾಗಿರುವಂತೆ ಮೇಲು ನೋಟಕ್ಕೆ ಕಂಡುಬರುತ್ತವೆ.

ರಂಗಪ್ಪ, ರಾಮಸ್ವಾಮಿ, ರಂಗಸ್ವಾಮಿ, ವೆಂಕಟಶಾಮಿ, ಉಗ್ರಪ್ಪ, ಜ್ಯೋಗ್ಯೋರ ಅಂಜಪ್ಪ, ವೇಲೂರಿನ ಲಕ್ಷ್ಮಮ್ಮ ಮೇಷ್ಟ್ರು ಗೊಂಬೆ ನಾವು ನಮ್ಮ ದಿನನಿತ್ಯದಲ್ಲಿ ಕಾಣುವ ಪಾತ್ರಗಳಾಗಿವೆ.

ಕಲೆಯ ದೃಷ್ಟಿಯಿಂದ ಶ್ರೀನಿವಾಸರ ಎಲ್ಲಾ ಕತೆಗಳೂ ಪರಿಪೂರ್ಣವಾಗಿವೆ. ಇವರ ಪ್ರಭಾವದಲ್ಲಿ ಬಂದ ಮತ್ತೊಬ್ಬ ಪ್ರಮುಖ ಕತೆಗಾರರೆಂದರೆ ಆನಂದರು ಇವರ 'ಭವತಿ ಭಿಕ್ಷಾಂ ದೇಹಿ ಕತೆ' ವಾರದ ಹುಡುಗನ ಬದುಕಿನ ನೋವಿನ ಚಿತ್ರಣವಿದೆ. ಇದರಲ್ಲಿ ಬೇವು-ಬೆಲ್ಲ ಕೊನೆ ಎಂಟಾಣಿ ಮೊದಲಾದ ಕತೆಗಳು ಈ ಜಾತಿಯವಾಗಿವೆ. ಹೆಂಡತಿಯ ಕಾಗದ, ನಾವು ಹಾಗೆಯೇ ಹೀಗೆ ಹಲವಾರು ಕತೆಗಳನ್ನು ರಚಿಸಿದ್ದಾರೆ. ಅವರ ಸುಪ್ರಸಿದ್ಧ ಕಥೆ 'ನಾನು ಕೊಂದ ಹುಡುಗಿ' ಆನಂದರ ಶೈಲಿಯ ದೃಷ್ಟಿಯಿಂದ ಆನಂದರ ಕತೆಗಳು ಸಾಹಿತ್ಯಕ್ಕೆ ಮಹತ್ವದ ಕೊಡುಗೆಯಾಗಿವೆ ಎನಿಸುತ್ತದೆ.

ಶ್ರೀ ಸ್ವಾಮಿ ಹಾಗೂ ಕೆ. ಗೋಪಾಲ ಕೃಷ್ಣರಾಯರನ್ನು ಇದೇ ಗುಂಪಿಗೆ ಸೇರಿಸಬಹುದಾಗಿದೆ. ಅವರ ನಟ ಮತ್ತು ಬಂಗಾರದ ಡಾಬು ಈ ಕಥಾ ಸಂಕಲನದಲ್ಲಿ ಚೆಲುವಾದ ಕತೆಗಳಾಗಿವೆ. ಮತ್ತೊಬ್ಬ ಕತೆಗಾರರೆಂದರೆ ಆನಂದಕಂದರ ಕಥಾಸಾಹಿತ್ಯ ಮಲ್ಲಮ್ಮನ ಮಹಾಭಾರತ ಹಾಗೂ ಇಬ್ಬಣದ ದಿಬ್ಬಣದಂಥ ಕತೆಗಳು ಸೊಗಸಾಗಿ ಮೂಡಿಬಂದಿದೆ. ಇದೇ ಗುಂಪಿಗೆ ಸೇರುವ ಮತ್ತೊಬ್ಬರೆಂದರೆ ಕೃಷ್ಣಕುಮಾರ ಕಲ್ಲೂರವರು. ಇವರ ಬಿಸಿಲುಗುದುರೆ ಜೀವನ ಗುಬ್ಬಿಗಳ ಸಂಸಾರ ಕಥಾ ಸಂಕಲನದಲ್ಲಿ ಕಥೆಗಳನ್ನು ಕಾಣಬಹುದು.

ಮಧ್ಯ ವಯಸ್ಸಿನಲ್ಲೆ ದಿವಂಗತರಾದ ಡಿ.ಎಚ್.ಪಿ. ಜೋಶಿರವರ ಕೆಲವು ಕತೆಗಳಲ್ಲಿ ಭಾವ ಪ್ರಭಾವದಲ್ಲಿ ಕತೆಯ ಸೌಂದರ್ಯ ಬಹಳ ಸೊಗಸಾಗಿದೆ. ನವಿಲುಗರಿಯಲ್ಲಿ ಪ್ರಕಟವಾದ ಕಿಚ್ಚಿನ ಕಾವಲು ಎಂಬ ಕತೆ ಅವರ ಸ್ವಭಾವವನ್ನು ಒಂದೇ ಕಡೆಗೆ ಹಿಡಿದು ತೋರಿಸಿದೆ.

'ಗಂಗೆಯ ಗುತ್ತಿಗೆ' ಎಂಬ ಕತೆಯನ್ನು ಬರದೆ ಟೇಂಗ್ಸ್ ಗೋವಿಂದರಾಯರು ಮುಂದೆ ಸಣ್ಣಕತೆಗಳನ್ನು ಬರೆಯದೇ ಇದ್ದದ್ದು ಸಾಹಿತ್ಯ ಲೋಕಕ್ಕೆ ಒಂದು ಸೋಜಿಗವಾಗಿದೆ. ಗಂಗೆಯ ಗುತ್ತಿಗೆ 'ಧಪ್ಪರ್ ಬಂದ್' ಈ ಎರಡು ಕತೆ ಅವರ ಪ್ರತಿಭೆಯ ಪ್ರತೀಕವಾದುದ್ದಾಗಿದೆ.

ಮುಗಳಿಯವರ 'ಕನಸಿನ ಕೆಳದಿ' ನಿಧಾನವಾಗಿ ಪ್ರಕಟಣೆಗೊಂಡರೂ ಅವರು ಇದೇ ತಲೆಮಾರಿಗೆ ಸೇರಿದವರಾಗಿದ್ದಾರೆ. ವಿತಂತು ವೇಶ್ಯೆ ಇವರ ಮತ್ತೊಂದು ಕತೆಯಾಗಿದೆ.

ಗೊರೂರು ಪಡಕೋಣೆ, ರಮಾನಂದರಾಯರ ಕತೆಗಳನ್ನು ಪ್ರತ್ಯೇಕವಾಗಿ ನೋಡಬೇಕು. ಇಬ್ಬರೂ ಹಾಸ್ಯ ವ್ಯಕ್ತಿಗಳಾದರೂ ಅವರ ಹಾಸ್ಯದಲ್ಲೆ ಕಥಾಂಶವಿದೆ. 'ಹುಚ್ಚು ಬೆಳದಿಂಗಳಿನ ಹೂಬಾಣಗಳು' ಎಂಬ ಕಥಾ ಸಂಗ್ರಹದಲ್ಲಿ ಕೆಲವು ಲೇಖನಗಳೇ ಕಥೆಗಳ ಗುಣಲಕ್ಷಣವನ್ನು ಹೊಂದಿವೆ. ಕೊಡಗಿನ ಗೌರಮ್ಮನವರು ಮೊದಲ ಲೇಖಕಿ ಎಂಬಂತೆ ಮೊದಲ ಕತೆಗಾರ್ತಿಯಾಗಿದ್ದಾರೆ. ಹೆಣ್ಣಿನ ಬಾಳಿನ ದುಃಖ ತೊಡಕು ತೊಂದರೆಗಳನ್ನು ಚಿತ್ರಿಸಿದ್ದಾರೆ. ಕಂಬನಿ, ಮರದ ಬೊಂಬೆ, ಹೂಬಿಸಿಲು, ಹೊಂಬಿಸಿಲು ಇತ್ಯಾದಿ ಕಥಾ ಸಂಗ್ರಹವನ್ನು ಕಾಣಬಹುದು.

ಇದೇ ಗುಂಪಿನಲ್ಲಿ ಕಾಣಬಹುದಾದ ಮತ್ತೊಬ್ಬ ಕತೆಗಾರರೆಂದರೆ ದೇವುಡುರವರು ಅವರ ವೈಣಿಕ, ಸೋಲೋ ಗೆಲುವೋ ನೀಳ್ಗತೆಗಳು ಇದರ ಕೃತಿಗಳಾಗಿವೆ.

ಬೇಂದ್ರೆಯವರ ಕತೆಗಳು ಪು.ತಿ.ನ., ಕುವೆಂಪುರವರ ಕತೆಗಳು ರವೀಂದ್ರರ ಕತೆಯನ್ನು ಅನುಸರಿಸಿ ಬಂದವಾಗಿವೆ. ಕಥಾ ಸಂಗ್ರಹಗಳಾದ ನನ್ನ ದೇವರು ಮತ್ತು ಇತರ ಕತೆಗಳು ಹಾಗೂ ಸನ್ಯಾಸಿ ಮತ್ತು ಇತರ ಕತೆಗಳು ಎಂಬ ಕಥಾ ಸಂಗ್ರಹವನ್ನು ಕಾಣಬಹುದಾಗಿದೆ.

ಮೊದಲ ತಲೆಮಾರಿನ ಕಥಾ ಸಾಹಿತ್ಯ ಅನೇಕ ದೃಷ್ಟಿಯಿಂದ ಸಮೃದ್ಧವಾಗಿದ್ದರೂ ಕೂಡ ಮುಂದುವರಿಯಲಿಲ್ಲ. ಕ್ಷೀರ ಸಾಗರ ನಮ್ಮೂರಿನ ಪಶ್ಚಿಮಕ್ಕೆ ವೀ.ಸೀ ರವರ ಹುಚ್ಚು ಹಂಬಲ, ಕೆ. ಶಂಕರ ಭಟ್ಟರ ಅದ್ದಿದ್ದು, ಜಡಭರತರ ಜೋಗಜ್ಜನ ಬಹಿಷ್ಕಾರ, ಭಾರತಿ ಪ್ರಿಯರ 'ವೀಣೆ' ಹಾಗೂ 'ಒಂದು ಹಳೆಯ ಕತೆ' ಇವು ಕನ್ನಡ ಜನತೆ ಮರೆಯಲಾರದ ಕತೆಗಳು. ಸೇಡಿಯಪ್ಪು ಕೃಷ್ಣಭಟ್ಟರ ಕತೆಗಳ ಸ್ವರೂಪ ವಡ್ಡಾರಾಧನೆ ಕತೆಗಳ ಸ್ವರೂಪಕ್ಕೆ ಕಸಿಮಾಡಿದಂತಾಗಿದೆ.

ಪ್ರಗತಿಶೀಲತೆ ಹಳೆಯ ಸಾಹಿತ್ಯಕ್ಕೆ ಅಂಶತ ಆಗಿಯೇ ಆಗಲಿ ಪ್ರತಿಕ್ರಿಯೆಯನ್ನು ತೋರಿಸಲಾರಂಭಿಸಿತು. ಪ್ರಗತಿಶೀಲರ ದೃಷ್ಟಿಯಿಂದ ಹಳೆಯ ಸಾಹಿತ್ಯವೆಲ್ಲಾ ಬೂರ್ಜ ಸಾಹಿತ್ಯವಾಯಿತು ಮತ್ತು ಇಂಥ ವಾದಗಳಿಗೆ ಆಕರ್ಷಿತರಾದ ತರುಣ ಬರಹಗಾರರನೇಕರು ಕೇವಲ ಮನೋಧರ್ಮದ ಕಾವಿನಿಂದಲೇ ಸಾಹಿತ್ಯ ರಂಗಕ್ಕಿಳಿದರು. ಅನಕೃ ರವರು ಪ್ರಗತಿಶೀಲ ಕತೆಗಾರರಾದರೂ ಅವರ ಕತೆಯು ಸಂಪೂರ್ಣವಾಗಿ ಪ್ರಗತಿಶೀಲವಾದುದ್ದಲ್ಲ. ಅವರ ಕತೆಗಳಲ್ಲಿ ಬಡತನ, ಸಾಮಾಜಿಕವಿಷಮತೆ, ರಾಜಕೀಯ ವಸ್ತು ಕತೆಯ ವಿಷಯಗಳಾಗಿವೆ.

ನಿರಂಜನ, ತರಾಸು ರಂಥವರು ಕಥಾ ಲೇಖನವನ್ನುಬಿಟ್ಟು ಕಾದಂಬರಿಗೆ ಗಂಟುಬಿದ್ದರು. ತರಾಸು ಹೆಚ್ಚು ಕತೆಗಳನ್ನು ಬರೆದಿದ್ದಾರೆ. ಗಿರಿಮಲ್ಲಿಗೆಯ ನಂದನದಲ್ಲಿ ರಾಜಾ ಸಾಹೇಬ ಎಂಬ ಕಥಾ ಸಂಗ್ರಹವನ್ನು ಕಾಣಬಹುದು. ಕಟ್ಟೀಮನಿಯವರ ಕಾರವಾನ್, ಕಥಾ ಸಂಕಲನ ಹಾಗೂ ಜೀವನ ಕಲೆ ಬಣ್ಣದ ಬುಗ್ಗೆ, ಗಿರಿಜಾ ಕಂಡ ಸಿನಿಮಾ ಕತೆಗಳು ಬಡತನ, ಡಾಂಭಿಕತೆ ಈ ಕತೆಗಳಲ್ಲಿವೆ.

ನಿರಂಜನರ 'ಕೊನೆಯ ಗಿರಾಕಿ' ಪ್ರಸಿದ್ಧ ಕತೆಯಾಗಿದೆ. ಕೋ. ಚೆನ್ನಬಸಪ್ಪನವರ ಗಡೀಪಾರು ಹಾಗೂ ನಮ್ಮೂರಿನ ದೀಪ ಇವರ ಕಥಾ ಸಂಗ್ರಹ ಉಂಗುರದ ಉರುಳು, ಪರಿಣಾಮಕಾರಿಯಾದ ಕತೆಗಳಾಗಿವೆ.

ಅಶ್ವತ್ಥ, ಶ್ರೀಧರನ ಹಸಿವು, ಗಂಗು, ಜೂಜುಗಾರ ಇವರ ಪ್ರಮುಖ ಕತೆಗಳಾಗಿವೆ. ವ್ಯಾಸರಾಯ ಬಲ್ಲಾಳರ ಸಂಪಿಗೆ ಹೂ, ನಿವೃತ್ತಿ, ಭಾವಬಂಧನ, ಕೆಪು ಬತ್ತಿ ಇವು ಇವರ ಕತೆಗಳಾಗಿವೆ. ಮುಂಬಯಿ ಸುಶಿಕ್ಷಿತ ಹಲವಾರು ಸಮಸ್ಯೆಗಳನ್ನು ಇವರ ಕತೆಗಳಲ್ಲಿ ಕಾಣಬಹುದು. ದ.ಬಾ. ಕುಲಕರ್ಣಿ ಲೇಡಿ ಟೈಪಿಸ್ಟ್, ಕಪ್ಪು ಹುಡುಗಿ, ಜಾಗೀರಿಯ ದಿಂಬುರವರ ಕತೆಗಳಲ್ಲಿ ಜೀವನವನ್ನು ವಾಸ್ತವದಲ್ಲೆ ಸೌಂದರ್ಯವನ್ನು ಕಾಣಬಹುದು. ಜೀ.ಶಂ. ಪರಮ ಶಿವಯ್ಯನವರ ಕಾವಲುಗಾರ ಒಂದೇ ಒಂದು ಸಂಗ್ರಹವಾಗಿದೆ.

ಯಶವಂತ ಚಿತ್ತಾಲರ ಸಂದರ್ಶನ ಶ್ರೀನಾರಂಗಿಭಟ್ಟರ ದಕ್ಷಿಣ ಧ್ರುವ ನಕ್ಷಾಗ ಪ್ರಮುಖ ಕತೆಗಳಾಗಿವೆ. ನಮ್ಮ ಕವಿಗಳೆಂದು ಪ್ರಸಿದ್ಧರಾದ ರಾಮಚಂದ್ರಶರ್ಮರ ಏಳನೆಯ ಜೀವ, ಸೆರಗಿನ ಕೆಂಡ ಸಂಗಮ ಪ್ರಮುಖ ಕತೆಗಳಾಗಿವೆ. ರಾಮಚಂದ್ರರ ಬರವಣಿಯ ವೈಶಿಷ್ಟ್ಯ ಎಲ್ಲಾ ಕತೆಗಳು ಸೊಗಸಾಗಿ ಬಂದಿವೆ.

ಯು.ಆರ್. ಅನಂತಮೂರ್ತಿರವರ ಎಂದೆಂದೂ ಮುಗಿಯದ ಕತೆ, ತಾಯಿ, ಹುಲಿಯ ಹೆಂಗರುಳು ಇವರ ಕಥಾವಸ್ತು ಪ್ರಗತಿಶೀಲತೆಯದೇ ಆಗಿವೆ. ಶಾಂತಿನಾಥ ದೇಸಾಯಿಯ ಮಂಜುಗಡ್ಡೆ ವಸ್ತುವಿನ ದೃಷ್ಟಿಯಿಂದ ನವ್ಯವಾಗಿವೆ. ಚಂದೂ ಕತೆಗಳು ಪ್ರಮುಖವಾಗಿವೆ.

ಹೀಗೆ ನವ್ಯ ಕತೆ ಅದರ ಜೊತೆಗೆ ಬಂದ ಆಧುನಿಕ ಕತೆಗಳ ಬರವಣಿಗೆ ಸಾಗಿದೆ. ಲಂಕೇಶ, ಕೊ ಮ ಸೀತಾರಾಮ, ಗೋವಿಂದಮೂರ್ತಿ, ದೇವನೂರುರವರು ಪ್ರಮುಖ ಕತೆಗಾರರು ಇದ್ದಾರೆ. ಹೊಸಬರಲ್ಲಿ ಅನೇಕ ಪ್ರತಿಭಾವಂತ ಕತೆಗಾರರು ಇದ್ದಾರೆ. "ಇಷ್ಟಾದರೂ ಕನ್ನಡಕ್ಕೆ ರಕ್ತದಾನ ಮಾಡಬಲ್ಲಂಥ ಸಮರ್ಥ ಲೇಖಕನೊಬ್ಬ ಬರಬೇಕಾಗಿದೆ"* ಎಂದು ಕೀರ್ತಿನಾಥರು ಹೇಳಿದ್ದಾರೆ. ಭಾರತೀಯ ಪರಂಪರೆಯಲ್ಲಿ ಕತೆಗೆ ನಾಟಕಕ್ಕಿದ್ದಂತೆ ದೈವನೆಲೆಯನ್ನು ಕಲ್ಪಿಸಲಾಗಿದೆ. ಕಳೆದ ಆರು ದಶಕದಲ್ಲಿ ಮಹಿಳಾ ಕಥಾ ಸಾಹಿತ್ಯಕ್ಕೂ ಒಂದು ಪರಂಪರೆ ಇದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಡದೆ ಪತ್ನಿ, ವಿಧವೆ, ವೇಶ್ಯೆ ಆಗಿ ಗುರುತಿಸಿಕೊಂಡಿದ್ದರು. ಆನಂತರ ಮಹಿಳೆಯರೆಲ್ಲಾ ಕ್ರಾಂತಿಕಾರಕ ಬೆಳವಣಿಗೆಗೆ ಕಂಡು ಬಂದರು. ಈ ಪೀಳಿಗೆಯ ಪ್ರಮುಖ ಲೇಖಕಿಯರೆಂದರೆ ಅನುಪಮ ನಿರಂಜನ, ತ್ರಿವೇಣಿ, ರಾಜಲಕ್ಷ್ಮಿ, ಎನ್.ರಾವ್ ಹಾಗೂ ವೀಣಾರ ಕತೆಗಳು ನಾವು ನೋಡುವ ಅಂತರ್‌ಮುಖತೆಯ ಆವಿಷ್ಕಾರಗಳು.

ಜಾಗತಿಕ ಸ್ತ್ರೀಮುಕ್ತಿ ಚಳುವಳಿಯಿಂದ ಪ್ರಭಾವಿತರಾಗಿ ಅನೇಕ ಬರಹಗಾರ್ತಿಯರು ಬಂದರು. ವೈದೇಹಿ, ಅಬೂಬಕ್ಕರ್, ನೇಮಿಚಂದ್ರ, ಗೌರಮ್ಮ, ಶ್ಯಾಮಲಾದೇವಿ, ಲಲಿತಾನಾಯಕ್, ವೀಣಾ

---

*. *ಕೀರ್ತಿನಾಥ ಕುರ್ತಕೋಟಿ ; ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಪು.ಸಂ. 171*

ಶಾಂತೀಶ್ವರ ಕಮಲಮ್ಮನವರು ಪ್ರಮುಖ ಕತೆಗಾರ್ತಿಯರಾಗಿ ಕಂಡುಬರುತ್ತಾರೆ. ಸ್ತ್ರೀ ನೆಲೆಯಲ್ಲಿ ಸ್ತ್ರೀ ಶೋಷಣೆಯನ್ನು ಇವರ ಕತೆಗಳಲ್ಲಿ ಕಾಣಬಹುದಾಗಿದೆ.

ಆಧುನಿಕ ಕನ್ನಡ ಕಥನ ಸಾಹಿತ್ಯವನ್ನು ಒಟ್ಟಿಗೆ ನೋಡಿದಾಗ ಹೊಳೆಯುವ ಪ್ರಮುಖ ಸಂಗತಿ 19ನೇ ಶತಮಾನದಲ್ಲಿ ಪ್ರಾರಂಭವಾದ ಸಂಪ್ರದಾಯ ಮತ್ತು ಆಧುನಿಕತೆಗಳ ಮುಖಾಮುಖಿಯ ಪ್ರಕ್ರಿಯೆ ಕೊನೆಗೊಂಡಿಲ್ಲ. ಬಾಗಲೋಡಿ ದೇವರಾಯರ ಹುಚ್ಚು ಮುನ್ಸೀಫರ ಚರಿತ್ರೆ, ದೇಸಾಯಿ ಕ್ಷಿತಿಜ, ಅನಂತಮೂರ್ತಿಯವರ ಸೂರ್‍ಯ ಕುದುರೆ, ತೇಜಸ್ವಿಯವರ ಮಾಯಾಮೃಗ ಇವುಗಳಲ್ಲಿ ಸಾಂಸ್ಕೃತಿಕ ಆಯಾಮವನ್ನು ನೋಡಬಹುದು. ವಿವೇಕ ಶಾನಭೋಗರ ಹುಲಿಸವಾರಿ ಸಾಂಸ್ಕೃತಿಯ ಕನಸನ್ನು ಸೃಷ್ಟಿಸುವ ರಾಘವೇಂದ್ರ ಪಾಟೀಲರ 'ಲಯ' ಲಂಕೇಶರ ರೊಟ್ಟಿ ಸಾಮಾಜಿಕ ಪ್ರಜ್ಞೆ ಕೆಲಸ ಮಾಡುತ್ತದೆ. ಯಶವಂತರ ಸೆರೆ ಆಟ, ಕತೆಯಾದಳು ಹುಡುಗಿ, ಬೆಸಗರಹಳ್ಳಿ ರಾಮಣ್ಣನವರ 'ಕಕರನ ಯುಗಾದಿ' ಬರಗೂರು ರಾಮಚಂದ್ರಪ್ಪನವರ ಜನಪದ, ದೇವನೂರರ ದ್ಯಾವನೂರು ಕಥಾ ಸಂಕಲನ, ಕುಂ.ವೀ. ರವರ ಕತೆಗಳು ಪ್ರತಿಭಟನೆಯ ಅಂಶಗಳನ್ನಾಗಿ ಒಳಗೊಂಡಿವೆ.

ಸಿದ್ಧಲಿಂಗಯ್ಯನವರ 'ಮತಾಂತರ', ಅಮರೇಶ್ ನುಗಡೋಣಿರವ 'ನೀರು ತಂದವರು', ಮೊಗಳ್ಳಿರವರ 'ತೋಪು', ಫಕೀರ್ ಮಹಮದ್ ಕಟ್ಪಾಡಿಯವರ 'ನೋಂಬು', ಬಾನು ಮುಸ್ತಾಕರ ದೇವರು ಮತ್ತು ಅಪಘಾತ ವಿಶಿಷ್ಟ ಕತೆಗಳಾಗಿವೆ.

ಡಿ.ಎಚ್. ಲಾರೆನ್ಸ್, ಸತ್ಯನಾರಾಯಣರು, ಬಲ್ಲಾಳ, ಸೋಹಿತ ನಾಯ್ಕರ್ ಕತೆಗಳು, ಜಯಂತ ಕಾಯ್ಕಿಣಿ, ರಾಘವೇಂದ್ರ ಖಾಸನೀಸರು, ವಿ.ಬಿ. ರಾಘವ, ಸದಾಶಿವ ಆಧುನಿಕ ಕಾಲದ ಪ್ರಮುಖ ಕತೆಗಾರರಾಗಿದ್ದಾರೆ.

ಹೀಗೆ ಸಣ್ಣಕತೆಗಳು ಪರಂಪರೆಯ ಹೊಸತೊಂದು ಹಾದಿ ಸೃಷ್ಟಿಗೊಂಡಿದೆ.

## ಅಧ್ಯಾಯ - 3

## ಆಯ್ದ ಸಣ್ಣಕತೆಗಳಲ್ಲಿ ಬಡತನದ ಪರಿಕಲ್ಪನೆ

ಆಧುನಿಕ ಆಯ್ದ ಸಣ್ಣಕತೆಗಳಲ್ಲಿ ಬಡತನದ ಪರಿಕಲ್ಪನೆ ಹೇಗೆ ವ್ಯಕ್ತವಾಗಿದೆ ಎಂಬುದನ್ನು ಹಲವಾರು ಕತೆಗಳಲ್ಲಿ ಕಾಣಬಹುದು. ಕಟ್ಟೀಮನಿಯವರು ತಮ್ಮ 'ಸೆರೆಯಿಂದ ಹೊರಗೆ' ಎಂಬ ಕಥಾ ಸಂಕಲನದಲ್ಲಿ ಬಡತನದ ವಾಸ್ತವ ಚಿತ್ರಣವನ್ನು ನೀಡಿದ್ದಾರೆ. ಅದರಲ್ಲಿ 'ಗಿರಿಜಾ ಕಂಡ ಸಿನಿಮಾ' ಎಂಬುದರಲ್ಲಿ ಬಡತನವೇ ಕತೆಯ ವಸ್ತುವಾಗಿದೆ. ದುಡಿಯುವ ಜನ ಬಡತನದಿಂದಾಗಿ ತಮ್ಮ ಜೀವನದ ಚಿಕ್ಕಪುಟ್ಟ ಸಂತೋಷಗಳಿಂದಲೂ ಹೇಗೆ ವಂಚಿತರಾಗಬೇಕು ಎಂಬುದರ ಚಿತ್ರಣವಿದೆ. ಈ ಕತೆ ಸಾಕಷ್ಟು ವಸ್ತುನಿಷ್ಠವಾಗಿಯೆ ನಿರೂಪಿತಗೊಂಡಿದೆ.

ಈ ಕತೆಯಲ್ಲಿ ಬರುವ ಸಿದ್ಧರಾಮ ಮತ್ತು ಗಿರಿಜಾ ಎಂಬುವರು ಕಾರ್ಮಿಕ ದಂಪತಿಗಳಾಗಿದ್ದಾರೆ. ಸಿದ್ಧರಾಮ ಡಿಪೋ ಕೆಲಸಗಾರ, ಸಿದ್ಧರಾಮನಿಗೆ ಗಿರಿಜಾಳಲ್ಲಿ ಪ್ರೀತಿಯಿದೆ. ಅವಳು ಬಯಸುವ ವಸ್ತುಗಳನ್ನು ಒದಗಿಸಲಾರದಷ್ಟು ಬಡತನವಿದೆ. ಉದಾ: ಸಿನಿಮಾ ಪದದ ಉಪಯೋಗವನ್ನೆ ನೋಡಬಹುದು. ಗಿರಿಜಾಳಿಗೆ ಸಿನಿಮಾ ಎಂದರೆ ನಗರದ ಥಿಯೇಟರಿನಲ್ಲಿ ಬೆಳ್ಳಿಯ ತೆರೆಯ ಮೇಲೆ ಮೂಡಿ ಬರುವ ಚಿತ್ರವಾದರೆ, ಸಿದ್ಧರಾಮನಿಗೆ ಇಡಿಯ ಜೀವನವೇ ಒಂದು ಸಿನಿಮಾ. ಈ ಭಾನುವಾರವಾದರೂ ತೋರಿಸಲೇಬೇಕು ಎಂದು ಗಿರಿಜಾ ಹಟ ಹಿಡಿದಾಗ ಸಿದ್ಧರಾಮ "ಭಾನುವಾರದವರೆಗೂ ಕಾಯೋದೇಕೆ ಹುಚ್ಚಿ? ಈಗಲೇ ಈ ಗಳಿಗೆಯಲ್ಲೇ ಈ ಕೊಠಡಿಯಲ್ಲೇ ನಡೆದಿದೆಯಲ್ಲ ಸಿನಿಮಾ! ನಮ್ಮ ಸಿನಿಮಾ! " ಸಿದ್ಧರಾಮನ ಕಲ್ಪನೆಯ ಸಿನಿಮಾ ಬರೀ ನೋಡುವುದಕ್ಕಾಗಿ ಇಲ್ಲ, ಅದರಲ್ಲಿ ಎಲ್ಲರೂ ಪಾತ್ರಗಳೇ. ಇದೊಂದು ಮಹಾ ದೊಡ್ಡ ಸಿನಿಮಾ ! ಅದರಲ್ಲಿ ಪಾತ್ರವಹಿಸುವವರು ಹತ್ತಿಪ್ಪತ್ತು ಮಂದಿ ಮಾತ್ರವಲ್ಲ ದೇಶದ ಬಡಜನರೆಲ್ಲಾ ಅದರಲ್ಲಿ ಅಭಿನಯಿಸುತ್ತಿದ್ದಾರೆ. ನಾನೇ ಅದರ ನಿರ್ಮಾತೃ, ನಿರ್ದೇಶಕರು." *

*. *ಜಿ.ಎಸ್.ಆಮೂರರ ಕನ್ನಡ ಕಥನ ಸಾಹಿತ್ಯ ; ಸಣ್ಣಕತೆ, ಪು.ಸಂ. 104*

"ಇಲ್ಲಿ ಅವರ ಬಡತನದ ಸ್ಥಿತಿಯಿಂದ ಗಿರಿಜಾ ಸಿನಿಮಾ ನೋಡುವ ಆಸೆಯನ್ನು ಕೈಬಿಡುತ್ತಾಳೆ. ಥಿಯೇಟರ್ ಸಮೀಪದಲ್ಲಿ ವಂಚಕರಿಂದ ಕೂಲಿಯೊಬ್ಬನಿಂದ ರಕ್ಷಿಸಲು ಹೋಗಿ ಪೆಟ್ಟು ತಿನ್ನುತ್ತಾನೆ" ಇಲ್ಲಿ ಸಮಾಜದ ಬೇರೊಂದು ಸ್ತರವನ್ನು ಪ್ರತಿನಿಧಿಸುವ ಅಚೆಮನೆ ದೇವಮ್ಮ ಹಾಗೂ ಅವಳ ಸೂಪರ್‌ವೈಜರ್ ಗಂಡ ಇವರ ಐಹಿಕ ಸುಖ ಈ ದಂಪತಿಗಳು ಅನುಭವಿಸುವ ಸೋಲಿಗೆ ಒಂದು ವಿರುದ್ಧ ಪ್ರತಿಮೆಯಾಗಿ ಒಂದು ಕತೆಗೆ ಸಾಂದ್ರತೆಯನ್ನು ಒದಗಿಸುತ್ತದೆ.

ಕಾರವಾನ್ ಸಂಕಲನದಲ್ಲಿ ಕಂಡು ಬರುವ 'ಹೊಸ ವರುಷದ ಹಳೆಯ ರಾತ್ರಿ!' ಕತೆ ಹೆಚ್ಚುಕಡಿಮೆ ಈ ತೆರನಾದದ್ದೇ. ಬಡತನದ ಬಗ್ಗೆ ಇವರ ಕತೆಗಳು ಹೆಚ್ಚಾಗಿ ಕಂಡುಬರುತ್ತವೆ. ಬಡತನದ ಕ್ರೌರತೆಯನ್ನು ಈ ಕತೆಯಲ್ಲಿ ಕಾಣಬಹುದಾಗಿದೆ. ಕರಿಯ ತನ್ನ ಮಗುವಿನ ಹಸಿವನ್ನು ತೀರಿಸಲು ಆಗದ ಅಸಹಾಯಕನಾಗಿ ಕಂಡುಬರುತ್ತಾನೆ. ಹೊಸ ವರ್ಷದ ದಿನ ಎಲ್ಲೆಲ್ಲೂ ಸಂಭ್ರಮ, ಆದರೆ ದಿನ ಕೂಲಿ ಮಾಡಿ ಜೀವನ ಸಾಗಿಸುವಂಥ ಬಡ ಕುಟುಂಬಗಳಿಗೆ ಎಲ್ಲಾ ದಿನವೂ ಒಂದೇ ಆಗಿರುತ್ತದೆ. ಶ್ರೀಮಂತರ ಸೌಧದ ಪಕ್ಕದಲ್ಲೇ ಕಿರಿಯನ ಗುಡಿಸಲು ಅಲ್ಲಿ ಹಬ್ಬದ ವಾತಾವರಣವಿದ್ದರೆ ಕರಿಯನ ಗುಡಿಸಲಿನಲ್ಲಿ ಬಡತನ. ಎಲ್ಲಾ ದಿನಗಳು ನೋವು, ದುಃಖ, ಬಡತನದಲ್ಲೇ ಜೀವಿಸುವಂತಹ ಚಿತ್ರಣ ಇಲ್ಲಿ ಕಾಣುತ್ತದೆ.

ನವೋದಯ ಕಾಲದ ಸಾಹಿತ್ಯದ ಕೆಲವೊಂದು ದುರ್ಬಲ ಅಂಶಗಳತ್ತ ಮೊದಲು ಗಮನಹರಿಸಿದ ಲೇಖಕರಲ್ಲಿ ಇವರು ಪ್ರಮುಖರು. ಇವರ ಕತೆಗಳಲ್ಲೂ ಹಸಿವು, ಬಡತನದ ಪರಿಕಲ್ಪನೆ ಹೆಚ್ಚಾಗಿ ಕಂಡುಬಂದಿದೆ. ಕಟ್ಟೀಮನಿಯವರಂತೆ ನಿರಂಜರೂ ಸಹ ಬಡತನವನ್ನು ತಮ್ಮ ಕತೆಯ ವಸ್ತುವಾಗಿಸಿಕೊಂಡಿದ್ದಾರೆ. ಕಡುಬಡತನ, ಹಸಿವು, ತೀವ್ರಶೋಷಣೆ, ಹಿಂಸೆ, ಅಸಹಾಯಕತೆ, ವಿಷಾದ, ದುಃಖದುಮ್ಮಾನಗಳ ಅನಾವರಣ ಅವರ ಕತೆಗಳಲ್ಲಿದೆ.

'ಕಾಯಾ ಶ್ರೀ ಗೌರಿ' ಎಂಬ ಕತೆಯಲ್ಲಿ ಬರಗಾಲದ ಪರಿಣಾಮವಾಗಿ ಕಿತ್ತು ತಿನ್ನುವ ಬಡತನದ ಪರಿಕಲ್ಪನೆಯನ್ನು ಈ ಕತೆಯಲ್ಲಿ ಕಾಣಬಹುದಾಗಿದೆ. ಚೆನ್ನಿ ಮತ್ತವಳ ಗಂಡ ಮಕ್ಕಳು ಮೈಸೂರಿಗೆ ವಲಸೆ ಬರುತ್ತಾರೆ. ಕೆಲಸ ಸಿಗದೇ ಹಸಿವನ್ನು ತಾಳಲಾರದೆ ತಮ್ಮ ಮಕ್ಕಳನ್ನು ಮಾರಾಟ ಮಾಡುತ್ತಾರೆ.

ಇದರ ಉದ್ದೇಶ ಅವರ ಸ್ವಾರ್ಥಕ್ಕಾಗಿ ಅಲ್ಲ, ಮಕ್ಕಳಾದರೂ ಎಲ್ಲಾದರೂ ಬದುಕುಳಿಯಲಿ ಎಂಬುದಾಗಿದೆ. ಹೀಗೆ ಬಡತನದ ಘೋರ ಸನ್ನಿವೇಶವನ್ನು ಈ ಕತೆಯಲ್ಲಿ ಕಾಣಬಹುದು.

'ಕ್ಷಾಮ ಶಿಶು' ಎಂಬ ಕತೆಯಲ್ಲಿ ಕ್ಷಾಮದಲ್ಲಿ ಸತ್ತ ಪ್ರೇತವೊಂದು ತನ್ನ ಕಥೆಯನ್ನು ಹೇಳಿಕೊಳ್ಳುವ ರೀತಿಯೇ ಈ ಕತೆಯ ಪ್ರಮುಖ ಅಂಶ. ಕಾಲರದಿಂದ ಸತ್ತಿರುವುದಾಗಿ ಸಾಮಾನ್ಯ ಅಭಿಪ್ರಾಯ. ಆದರೆ ಹಸಿವು ಸಾವಿಗೆ ಕಾರಣವಾಗಿರುವುದು ಆ ಪ್ರೇತದಿಂದ ತಿಳಿಯುತ್ತದೆ. ಇಲ್ಲಿ ಬಡತನದ ಪರಿಕಲ್ಪನೆ ಒಂದು ವಿಶಿಷ್ಟವಾದ ರೀತಿಯಲ್ಲಿ ಬಂದಿದೆ.

ಬಡತನದ ಪರಿಕಲ್ಪನೆಯಲ್ಲಿ 'ಅವರು' ಎಂಬ ಕತೆಯಲ್ಲಿ ಬಡವನಿಗೆ ಬಡವರೇ ದಿಕ್ಕು ಎಂಬ ಅಂಶವು ವ್ಯಕ್ತಗೊಂಡಿದೆ. ಬಡತನದಿಂದ ನರಳುತ್ತಿರುವ ಕುಟುಂಬದ ಸ್ಥಿತಿಯ ದಾರುಣತೆ ಇಲ್ಲಿದೆ.

ಕಾಮುಕ ಸಮಾಜದ ನಿರ್ಲಜ್ಜ ಶೋಷಣೆಗೆ ಒಳಗಾದ ಮೂಕ ಸಾಕ್ಷಿಯಾಗಿ ನಿಲ್ಲುತ್ತಾಳೆ 'ಕಾಣೆ'. ನೋವಿಗೆ ಮಾತು ಕೊಡಲು ಸಾಧ್ಯವಿಲ್ಲದ ಲಕ್ಷಾಂತರ ಜನರ ಪ್ರತಿನಿಧಿಯೂ ಹೌದು. ಕತೆಯ ಪ್ರಾರಂಭದಿಂದ ಕೊನೆಯವರೆಗೂ ಹಸಿವು, ನಿರಂತರ ಕಾಮುಕ ಪ್ರತಿನಿಧಿಯೂ ಹೌದು. ನಿರಂತರ ಕಾಮುಕ ಶೋಷಣೆ, ರೋಗರುಜಿನಗಳು ತಗುಲಿದ ಪರಿಣಾಮವಾಗಿ ಹರೆಯದಲ್ಲೇ ಸತ್ತ ಅವಳ ಹೆಣದ ಮೇಲೆ ಗಿಡುಗವೊಂದು ಸುತ್ತು ಹಾಕುತ್ತಿರುತ್ತದೆ. ಇನ್ನೂ ಉಳಿದಿರಬಹುದಾದ ಅವಳ ದೇಹದ ಮಾಂಸವನ್ನು ಕುಕ್ಕಿ ತಿನ್ನಲು ಕಾಯುತ್ತಿರುವ ಹದ್ದು 'ಕೊನೆಯ ಗಿರಾಕಿ'ಯಾಗಿ ನಿಲ್ಲುವುದು. ಸತ್ತರೂ ನಿಲ್ಲದ ಶೋಷಣೆಯ ಪ್ರತೀಕ ಇಲ್ಲಿದೆ.

ಚದುರಂಗರು ನಮ್ಮ ನೆನಪಿನಲ್ಲುಳಿಯುವುದು ವೈಶಾಖದಂಥ ಕಾದಂಬರಿಗಳ ಮೂಲಕವಾಗಿಯೇ ಎನ್ನುವುದು ನಿಜವಾದರೂ ಸಣ್ಣಕತೆ ಕೂಡ ಅವರಿಗೆ ಪ್ರಿಯವಾದುದ್ದಾಗಿದೆ. 'ಬಣ್ಣದ ಬೊಂಬೆ ಎಂಬ ಕತೆಯಲ್ಲಿ ವನಜಾಕ್ಷಿ ಎಂಬ ಹುಡುಗಿ ಶ್ರೀಮಂತ ಹುಡುಗಿ ಪುಟ್ಟರಂಗಿಯೊಡನೆ ಸ್ನೇಹ ಬೆಳೆಸಿ ಅವಳೊಡನೆ ಕದ್ದು ಆಟ ಆಡುತ್ತಿರುತ್ತಾಳೆ. ಒಮ್ಮೆ ಬೊಂಬೆಯನ್ನು ಆಸೆ ಪಟ್ಟ ಪುಟ್ಟರಂಗಿಗೆ ವನಜಾಕ್ಷಿ

ಬೊಂಬೆ ಕೊಟ್ಟಾಗ ಅವಳು ಖುಷಿಯಿಂದ ತಾಯಿಯ ಬಳಿಗೆ ಹೋದಾಗ ಆಕೆ ಅದು ತಪ್ಪೆಂದು ಅದರಿಂದ ಅಪವಾದ ಬರುತ್ತದೆಂದು, ಸಮಸ್ಯೆಗಳೇ ಹೆಚ್ಚು ಎಂದು ಹಿಂದಿರುಗಿಸಲು ಹೇಳಿದಾಗ ಆ ಮುಗ್ಧ ಮನಸ್ಸಿಗೆ ನೋವಾಗುತ್ತದೆ. ಚಿಕ್ಕ ಮಗುವಿನ ಆಸೆಯನ್ನು ಈಡೇರಿಸಲು ಆಗದಂತಹ ಬಡತನ, ಅಸಹಾಯಕತೆ, ನೋವು, ನಿರಾಸೆಗಳು ಇಲ್ಲಿ ಕಥೆಯ ಅರ್ಥ ವ್ಯಾಪ್ತಿಯನ್ನು ವಿವರಿಸುತ್ತದೆ.

ಪಿ. ಲಂಕೇಶರ 'ರೊಟ್ಟಿ' ಕನ್ನಡ ಸಾಹಿತ್ಯದಲ್ಲಿ ಅತ್ಯುತ್ತಮ ಕತೆ. ಕತೆಯಲ್ಲಿ ಬಡತನದ ಪರಿಕಲ್ಪನೆ ಹೆಚ್ಚಾಗಿ ಕಂಡುಬಂದಿದೆ. ಬಾಣಂತಿ ಮಗಳನ್ನು ಆರೈಕೆ ಮಾಡಲು ಹೊರಟಿರುವ ಹಳ್ಳಿಯ ಹೆಣ್ಣು ಮಗಳು ರೈಲು ನಿಲ್ದಾಣದಲ್ಲಿ ರೈಲು ಬರುವಿಕೆಗಾಗಿ ಕಾಯುತ್ತಿರುತ್ತಾಳೆ. ರೈಲು ಬರುವುದು ತಡವಾದ್ದರಿಂದ ಹಸಿವನ್ನು ತಡೆಯಲಾರದೆ ರೊಟ್ಟಿಯನ್ನು ತಿನ್ನಲು ಪ್ಯಾಕೆಟ್ ಬಿಚ್ಚಿದಾಗ ಹಸಿವನ್ನು ತಾಳಲಾರದೆ ನಿಂತಿದ್ದ ಒಬ್ಬ ಭಿಕ್ಷುಕ ಅವಳ ಬಳಿ ಬಂದು ಅದನ್ನು ಕಸಿದುಕೊಂಡು ತಿನ್ನುತ್ತಿರುತ್ತಾನೆ. ಅವಳು ಕಳ್ಳ ಕಳ್ಳ ಎಂದು ಬೊಬ್ಬೆ ಬಡಿದಾಗ ಪೊಲೀಸರು ಅವನನ್ನು ಬಂದು ಹೊಡೆದು ಅವನ ತಲೆಯಲ್ಲಿ ರಕ್ತ ಬರಿಸುತ್ತಾರೆ. ಅವನು ಈಕೆಯನ್ನು ನೋಡುತ್ತಾ ಜನರ ಮರೆಯಲ್ಲಿ ಮರೆಯಾಗುತ್ತಾನೆ. ಹಸಿವಿನ ಚಿತ್ರಣವನ್ನು ಈ ಕತೆಯಲ್ಲಿ ಕರುಳು ಹಿಂಡುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಬಡತನದ ಹೃದಯ ವಿದ್ರಾವಕ ಚಿತ್ರಣ ಇಲ್ಲಿ ಕಾಣಬಹುದಾಗಿದೆ. ಬಡತನದ ಕ್ರೌರ್ಯ, ವರ್ಗ ಸಂಘರ್ಷ, ವ್ಯವಸ್ಥೆಯ ದೋಷಗಳ ಅತ್ಯುತ್ತಮ ಪ್ರತೀಕವಾಗಿ ನಿಲ್ಲುತ್ತದೆ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆಯಲ್ಲಿ ಕಿಶೋರಾವಸ್ಥೆಯಿಂದ ಹರೆಯದ ಪ್ರಬುದ್ಧತೆಯತ್ತ ಸಾಗುವ ಉಮಾಪತಿಯ ಮಾನಸಿಕ ತೊಳಲಾಟ ಅವನ ಸಾಮಾಜಿಕ ಪರಿಸರದ ಸಂದಿಗ್ಧತೆಯನ್ನು ವಿವರಿಸುತ್ತದೆ. ನಿಂಗಪ್ಪಗೌಡ ತನ್ನ ಅವ್ವ, ಅಕ್ಕನೊಡನೆ ಹೊಂದಿದ ಸಂಬಂಧಕ್ಕೆ ಬಡತನವೇ ಪ್ರಮುಖ ಕಾರಣವಾಗಿದೆ. ಶಿಕ್ಷಣ ನಡೆಸಲು ಅವನು ಸ್ಕಾಲರ್ ಮೊರೆ ಹೋಗುವುದು ಶೈಕ್ಷಣಿಕ ಬಡತನ ಜೊತೆಗೆ ಅವನಲ್ಲಿ ಅದೇ ಕಾರಣಕ್ಕೆ ಉಂಟಾದ ಬದಲಾವಣೆಯನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

ಬೆಸಗರಹಳ್ಳಿಯವರ ಒಂದು ಹುಡುಗನಿಗೆ ಬಿದ್ದ ಕನಸು ಸಂಗ್ರಹದ 'ಗಾಂಧಿ' ಕತೆಯಲ್ಲಿ ಮಹಾತ್ಮಗಾಧಿ ಹೆಸರಿನ ಹುಡುಗ ರೋಗದಿಂದ ಬಳಲುತ್ತಿರುತ್ತಾನೆ. ಕರಿಸಿದ್ದೇಗೌಡ ತನ್ನ ಮೊಮ್ಮಗನನ್ನುಳಿಸಿಕೊಳ್ಳಲು ಇದ್ದ ಒಂದೇ ಹಲಸಿನ ಮರವನ್ನು ಮಾರಿದರೂ ಅದರಿಂದ ಪ್ರಯೋಜನವಾಗುವುದಿಲ್ಲ. ಇಲ್ಲಿ ಬಡವರ ಬಗ್ಗೆ ನಿರ್ಲಕ್ಷ್ಯ ತೋರುವ ಸಮಾಜದ ಚಿತ್ರಣವಿದೆ. ಗಾಂಧಿಯ ಹೆಸರಿಗೂ ನಿಲ್ಲದ ಶೋಷಣೆ, ವ್ಯವಸ್ಥೆಯ ಕ್ರೌರ್ಯಗಳ ಅತ್ಯುತ್ತಮ ವ್ಯಂಗ್ಯ ಪರಂಪರೆ ಇಲ್ಲಿದೆ.

ಕುಂ. ವೀ. ರವರು ಸಮಾಜದ ನಿರ್ಲಕ್ಷಿತ ಜನರ ಜೀವನವನ್ನು ಸಮೀಪದಿಂದ ನೋಡಿದವರಲ್ಲಿ ಪ್ರಮುಖರು. ಹುಗ್ಗಿ ಎಂಬ ಕತೆಯಲ್ಲಿ ಕುಂ.ವೀ. ತೋರುವ ಸಂಯಮ ಅವರ ಕತೆಗಳಲ್ಲೆಲ್ಲ ಅಪೂರ್ವವಾದುದು. ಬಸವ ಎಂಬ ಹುಡುಗನನ್ನು ಅವರ ಅಪ್ಪ ಬಡತನದ ಒತ್ತಡಗಳಿಂದಾಗಿ ಗೌಡನಿಗೆ ಜೀತದಾಳಾಗಿ ಮಾರಿರುತ್ತಾನೆ. ಆದರೆ ಬಸವನಿಗೆ ಅದರ ಅರಿವಿಲ್ಲ, ಅವನ ಆಸಕ್ತಿಯೆಲ್ಲಾ ಅವ್ವ ಮಾಡುತ್ತಿದ್ದ ಹುಗ್ಗಿಯ ಕಡೆಗೆಯೇ ಇದ್ದಿತ್ತು. ಅವನನ್ನು ಮಾರಿದ ದುಃಖದಲ್ಲಿ ಅವನ ತಂದೆ ತಾಯಿಗಳು ಇದ್ದರು. ಇಲ್ಲಿ ಅವರ ಬಡತನದ ಸ್ಥಿತಿಯ ದಾರುಣತೆಯನ್ನು ನಾವು ಕಾಣಬಹುದು. 'ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ' ಕತೆಯಲ್ಲಿ ಬಡತನದ ಪರಿಕಲ್ಪನೆಯನ್ನು ಕಾಣಬಹುದಾಗಿದೆ. ತಿಪ್ಪವ್ವನೆಂಬ ಮಹಿಳೆಯು ತನ್ನ ಗಂಡನ ದುಶ್ಚಟಗಳಿಂದ ಆಸ್ತಿ ಕಳೆದುಕೊಂಡು ನಿರ್ಗತಿಕಳಾದರೂ ಧೈರ್ಯಗುಂದದೆ ತನ್ನ ಮಕ್ಕಳು ಅತ್ತೆಯನ್ನು ತುಂಬಾ ಕಷ್ಟಪಟ್ಟು ಸಾಕುತ್ತಾಳೆ.

ಹಿಂದಿನ ಕಾಲದ ಹಬ್ಬ ಹರಿದಿನ, ಆಚಾರ-ವಿಚಾರ, ದಾನ-ದತ್ತಿಗಳ ವಿವರಣೆಯನ್ನು ತಿಪ್ಪವ್ವನೆಂಬ ಕೆಳವರ್ಗದ ಬಡವಿಧವೆಯ ಮಾತಿನ ಮೂಲಕ ಕುಂ.ವೀ. ಸಂಪ್ರದಾಯ ಬಿಚ್ಚಿ ತೋರಿಸುತ್ತಲೇ ಅದರ ಹಿಂದಿರುವ ಅನಿಷ್ಟ ಶೋಷಣೆಯನ್ನು ರತ್ನ ಎಂಬ ಹುಡುಗಿಯ ಮೂಲಕ ಹೊರ ಹಾಕುತ್ತಾರೆ.

ಬದುಕು ಸಾಗಿಸುವುದೇ ಕಷ್ಟವಾಗಿರುವ ಸಂದರ್ಭದಲ್ಲಿ ಹಬ್ಬ ಹರಿದಿನಗಳನ್ನು ಸಾಲ ಮಾಡಿಯಾದರೂ ತೀರಿಸುವ ನೈತಿಕ ಸ್ಥಿತಿಯಲ್ಲಿ ತಿಪ್ಪವ್ವ ಕಂಡುಬಂದರೆ ಶುಕ್ರಯ್ಯ ಪುರೋಹಿತಶಾಹಿಯ ಪ್ರತಿನಿಧಿಯಾಗಿ 'ಬೀಡಿ ಖರ್ಚಿಗೆ ಮೂರು ಪಾವಲಿ ಕೊಡಬೇಕವ್ವಾ ಇಲ್ಲಾಂದ್ರೆ ಭಿನ್ನ ತೀರ್‍ಸಿ ಏನ್ ಸಾರ್ಥಕ' ಎಂದು ಹೇಳುವ ಮಾತಿನಲ್ಲಿ ಬಿಟ್ಟಿಕೂಳು ತಿಂದಿದ್ದಲ್ಲದೆ ಇಲ್ಲದವರ ಮೇಲೆ ಶೋಷಣೆ ಮಾಡುವ ಸಂಸ್ಕೃತಿಯನ್ನು ಇಲ್ಲಿ ಕಾಣಬಹುದು. ಪಾರಂಪರಿಕವಾಗಿ ನಡೆದುಬಂದಿರುವ ತ್ರಿವಿಧ ದಾಸೋಹ ಕಲ್ಪನೆ ಆಧುನಿಕ ಸಂದರ್ಭದಲ್ಲಿ ಕೆಳವರ್ಗಗಳಲ್ಲಿ ಹೇಗೆ ಮಹತ್ವವನ್ನು ಕಳೆದುಕೊಳ್ಳುತ್ತದೆ ಎಂಬುದನ್ನು ರತ್ನಳ ಮಾತುಗಳಲ್ಲಿ ಕಾಣಬಹುದು.

"ರತ್ನ ಪ್ರತಿಭಟನೆಯ ಪ್ರತೀಕವಾಗಿ ಕಾಣುತ್ತಾಳೆ. "ಲೋ ಮಕ್ಳಾ ಮುಕ್ಕಾಳ ಐನೋರ್‍ನ ಹಿಡುಕೊಳ್ಳಿ ಪುಗಸಟ್ಟೆ ತಿನ್ನೋಕೆ ನಾಚಿಕೆ ಆಗಲ್ವೇನೋ" ಎಂದು ಕರೆದು ಪೊರಕೆಯಿಂದ ಹೊಡೆದು ವಿರೋಧಿಸುವುದು ಹಾಗೂ ಮಾಡಿದ ಹೋಳ್ಗೆಯನೆಲ್ಲಾ ತಿಂತಿಯೇನೊ ಬಡ್ಯಾವ್ ಎನ್ನುವ ಮಾತಿನಲ್ಲಿ ಅವಳ ಹಸಿವಿನ ತೀವ್ರತೆಯನ್ನು ಇಲ್ಲಿ ಕಾಣಬಹುದು. ಬಡವರಾಗಿದ್ದರೂ ಕೂಡ ಹಬ್ಬ ಹರಿದಿನಗಳ ನೆಪದಲ್ಲಿ ಅವರನ್ನು ಮತ್ತಷ್ಟು ಬಡವರನ್ನಾಗಿ ಮಾಡುವ ಈ ಸಮಾಜದ ಕಟ್ಟುಪಾಡುಗಳನ್ನು ಇಲ್ಲಿ ಕಾಣಬಹುದು"*

'ಕತ್ತಲನು ತ್ರಿಶೂಲ ಹಿಡಿದ ಕತೆ' ಇಲ್ಲೂ ಬಡತನದ ತೀವ್ರತೆಯನ್ನು ಕಾಣಬಹುದು. ಕೆಳವರ್ಗಕ್ಕೆ ಸೇರಿದ ಕತ್ತಲ ಎಂಬುವನು ಹಸಿವನ್ನು ತಾಳಲಾರದೆ ಗರ್ಭಗುಡಿಗೆ ನುಗ್ಗುತ್ತಾನೆ. ಇಲ್ಲಿ ಅವನಿಗೆ ಅವನ ಸುತ್ತಮುತ್ತಲಿನ ಬಂಧಗಳ ಬಗ್ಗೆ ಅರಿವಿರುವುದಿಲ್ಲ. ಇನ್ನು ಮುಂದೆ ಹೋಗಿ ತನ್ನ ಬದುಕಿಗಾಗಿ ಜೀವಿಸುವುದಕ್ಕಾಗಿ ತ್ರಿಶೂಲ ಹಿಡಿದು ಯಾರಾದರೂ ಮುಂದೆ ಬಂದರೆ ಕೊಲ್ಲುವುದಾಗಿ ಬೆದರಿಕೆಯಾಕುತ್ತಾನೆ. ಅವನು ಗೌಡರ ಮನೆಯಲ್ಲಿ ಬಂಡಿಗಟ್ಟಲೆ ಕಟ್ಟಿಗೆಯನ್ನು ಸೀಳಿದಂತವನು. ದನಗಳ ಮೈಯನ್ನು ಕನ್ನಡಿಯಂತೆ ಸ್ವಚ್ಛ ಮಾಡಿದವನು. ಹೀಗೆ ಅವರ ಮನೆಯಲ್ಲಿ ಕೆಲಸ ಮಾಡುತ್ತಿದ್ದನು. ವಯಸ್ಸಾದ ಕಾರಣಕ್ಕಾಗಿ ಅವನನ್ನು ಹೊರಹಾಕಿದರು. ಆಗ ಅವನಿಗೆ ಹಸಿವಿನ ಪರಿಚಯವಾಗುತ್ತದೆ. ಅನ್ನ ಹಾಕುತ್ತಾರೆಂದು ಕಾದು ಕುಳಿತುಕೊಂಡು ಸಾಕಾದಾಗ ತಾನು ಕಾಗೆ ನಾಯಿಯಾದರೂ ಆಗಿದ್ದರೆ ನನಗೆ

*. *ಗಿರಡ್ಡಿ ಗೋವಿಂದರಾಜ ; ಕುಂ.ವೀ ಅವರ ಕಥಾಸಾಹಿತ್ಯ, ಪು.ಸಂ. 14*

ಅನ್ನ ಸಿಗುತ್ತಿತ್ತು, ಅಂತ ಅಂದುಕೊಳ್ಳುವುದು ಅಲ್ಲದೆ ಮನುಷ್ಯರಿಗೆ ಬದುಕುವ ಮನುಷ್ಯನಾಗಿ ಹುಟ್ಟಬಾರದಿತ್ತು ಅನಿಸಿತು. ಹುಟ್ಟಿದ ತಪ್ಪಿಗೆ ಬಿಟ್ಟನೆಂದರೂ ಬಿಡದೆ ಅಂಟಿಕೊಂಡಿರುವ ಹೊಟ್ಟೆ ಆ ಹೊಟ್ಟೆ ಇಲ್ಲದಿದ್ದರೆ ಗೌಡರ ಜಾಲಿ ಮರದ ನೆರಳಲ್ಲಿ ಚಾಕರಿ ಮಾಡುತ್ತಿರಲಿಲ್ಲ. ಕತ್ತಲ ಮೃಗಗಳು ಕತೆಯ ಶಂಕ್ರಯ್ಯ, 'ಸಮನ್ವಯ' ಕತೆಯ ಬ್ಯಾಡ್ರ, ಎಂಕ, 'ತಿರಸ್ಕೃತರು' ಕತೆಯ ನಿಂಗ ಮುಂತಾದವರು ಶೂದ್ರ ಬದುಕಿನ ವಿವಿಧ ಮುಖಗಳು. ಇಲ್ಲಿ ಹಸಿವಿನ ಚಿತ್ರಣ ಬದುಕಿನ ಅಸ್ತಿತ್ವ, ಅನ್ನಕ್ಕಾಗಿ ಹಾಹಾಕಾರ ಬದುಕಿನ ಹಂಬಲಗಳು ವ್ಯಕ್ತಗೊಳ್ಳುತ್ತವೆ.

'ಕಿವುಡ ನಾಯಿಯಾದ ಪ್ರಸಂಗ' ಎಂಬ ಕತೆಯಲ್ಲಿ ದಲಿತರ ಜೀವನದ ಬಡತನದ ಭೀಕರತೆಯ ದೃಷ್ಟಿಯನ್ನು ಕಾಣಬಹುದು. ಕತೆಯ ಆರಂಭವೇ ಆಘಾತಕಾರಿಯಾಗಿದೆ. ಈರಮ್ಮ ಎಂಬ 12 ವರ್ಷದ ಹುಡುಗಿ ಸತ್ತಿರುವ ವಿಷಯ ಕೇಳಿ ಮಾದಿಗರ ಕಿವುಡಗೆ ತನ್ನ ಐವತ್ತು ವರ್ಷದಲ್ಲಿ ಕಾಣದ ಸಂತೋಷವನ್ನು ಅಂದು ಕಂಡುಕೊಳ್ಳುತ್ತಾನೆ. ಎರಡು ದಿವಸದಿಂದ ಕಿವುಡ ಹಾಗೂ ಅವನ ಹೆಂಡತಿ ಮಕ್ಕಳು ಉಪವಾಸದಿಂದ ನರಳುತ್ತಿರುತ್ತಾರೆ. ಅವರು ಹೊಟ್ಟೆ ತುಂಬಾ ಉಣ್ಣಬೇಕಾದರೆ ಅವರ ಸಾಲ ತೀರಬೇಕಾದರೆ ಯಾರಾದರೂ ಸಾಯಬೇಕು. ಮೃದು ಭಾವನೆಗಳಿಗೆ ಅವನ ಮನಸ್ಸಿನಲ್ಲಿ ಸ್ಥಾನವೇ ಇಲ್ಲ. ಅವನನ್ನು ಕಾಡುವ ಒಂದೇ ಚಿಂತೆ ತನಗೆ ಕುಣಿ ತೆಗೆಯಲು ಯಾವಾಗ ಹೇಳಿಯಾರು, ಯಾವಾಗ ತನಗೆ ತನ್ನ ಮಾಮೂಲು ದೊರೆತೀತು ಎನ್ನುವುದಾಗಿದೆ. ಕೊನೆಗೂ ಅವನ ಆಸೆ ಈಡೇರಿ ಐದಾರು ರೂಪಾಯಿ ದೊರೆತಾಗ ಆ ಹಣವನ್ನು ಹಸನ್ ಸಾಬಿ ತಾನು ಕೊಟ್ಟ ಸಾಲಕ್ಕಾಗಿ ಅದನ್ನೂ ಕಿತ್ತುಕೊಂಡು ಬಿಡುತ್ತಾನೆ. ಆದರೂ ಆತನು ಧೈರ್ಯಗೆಡದೆ ಹೊಟ್ಟೆಗಿಂತ ಯಾವುದೇ ಪಾಪ-ಪುಣ್ಯ ದೊಡ್ಡದಲ್ಲ ಎಂಬುದಾಗಿ ಹೇಳುತ್ತಾನೆ. ದಾರಿಗುಂಟ ನಡೆದು ಸುಡುಗಾಡು ತಲುಪಿ ತಾನು ಅದೇ ತಾನೆ ಮುಚ್ಚಿದ ಕುಣಿಯನ್ನು ತೆಗೆಯುತ್ತಾನೆ. ಹೆಣದ ಕಾಲ ಬುಡದಲ್ಲಿದ್ದ ಎರಡು ತೆಂಗಿನ ಕಾಯನ್ನು ಹೊರ ತೆಗೆದುಕೊಳ್ಳುತ್ತಾನೆ. ಕಿವುಡ ಒಬ್ಬ ಒಳ್ಳೆಯ ಮನುಷ್ಯ, ಎಂದೂ ಯಾರ ಗೆರೆ ಗಾಟಿದವನಲ್ಲ. ನಂಬಿಕೆಯಲ್ಲಿ ಕೆಲವರು ಅವನನ್ನು ನಾಯಿಗೆ ಹೋಲಿಸುತ್ತಾರೆ. ಆದರೆ ಅನಿಷ್ಟ ಸಮಾಜದಲ್ಲಿ ಮನುಷ್ಯನಂತೆ ಬದುಕಲಾರ. ಆ ಅರಿವಿನ ಅಭಿವ್ಯಕ್ತಿಯೇ ಈ ಕತೆಯ ದುರಂತ ವಸ್ತುವಾಗಿದೆ. ದಲಿತ

ಜೀವನದ ಇಂಥ ಹಲವಾರು ವಾಸ್ತವ ಚಿತ್ರಗಳನ್ನು ಕುಂ. ವೀ. ಕೊಟ್ಟಿದ್ದಾರೆ. ಎಲ್ಲವೂ ಒಂದಿಲ್ಲೊಂದು ರೀತಿಯ ನೋವಿನಿಂದ ಕೂಡಿದ ಚಿತ್ರಗಳೇ.

ಫಕೀರ ಮಹಮ್ಮದ್ ಕಟ್ಪಾಡಿಯವರು ಗೋರಿ ಕಟ್ಟಿಕೊಂಡವರು ಹಾಗೂ ನೋಂಬು ಈ ಎರಡೇ ಸಂಗ್ರಹಗಳನ್ನು ಪ್ರಕಟಿಸಿದ್ದರೂ ಅವರು ಪ್ರಮುಖ ಕತೆಗಾರರಲ್ಲೊಬ್ಬರು. 'ನೋಂಬು'ವಿನಲ್ಲಿ ಬಡತನದ ಬಗ್ಗೆ ಮನಕರಗುವ ಚಿತ್ರಣವಿದೆ. ಬಡತನದ, ಹಸಿವಿನ ಅಸಹಾಯಕತೆಗಳ ವಿಭಿನ್ನ ನೋಟ ಬಾಲಕ ಅದ್ದುವಿನಿಂದ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ತನ್ನ ತಂದೆ ತಾಯಿಯಂತೆ ಅವನು ಕೂಡ ಶ್ರಮಜೀವಿ. ಬೀಡಿ ಕಟ್ಟುವ ಕಾಯಕವೆ ಅವನದು. ಆಟ ಆಡುವ ವಯಸ್ಸಿನಲ್ಲಿ ಮನೆಯ ಜವಾಬ್ದಾರಿಯಿಂದ ಸಹಜವಾಗಿ ದೂರ ಉಳಿಯುವ ಸಂದರ್ಭ ಅನಿವಾರ್ಯವಾಗಿದೆ. ಬಡತನದಲ್ಲಿಯೇ ಬೆಳೆದು ಬಂದ ಶ್ರೀಮಂತಿಕೆಯ ಕಲ್ಪನೆಯೇ ಇಲ್ಲದ ಅದ್ದುವಿಗೆ ಕಾಸೀಮನ ಮೂಲಕ ಹೊಸತೊಂದು ಲೋಕ ತೆರೆದುಕೊಳ್ಳುತ್ತದೆ. ಕಾಸೀಮ ಶ್ರೀಮಂತರ ಹುಡುಗ, ಅವನ ಮನೆಯ ಹೆಸರೇ 'ಜನ್ನತುಲ್ ಫಿರ್‌ದೌಸ್' ರಮಜಾನದಲ್ಲಿ 'ನೋಂಬು' ಮಾಡಿದವರು ಸ್ವರ್ಗಕ್ಕೆ ಹೋಗುತ್ತೇವೆಂದು ಅದ್ದು ಹೇಳುತ್ತಾನೆ. ಆದರೆ ಕಾಸೀಮನಂಥವರಿಗೆ ಈ ಸ್ವರ್ಗ ಭೂಮಿಯ ಮೇಲೆಯೇ ಸಿಕ್ಕುತ್ತದೆ ಎನ್ನುವುದನ್ನು ನೋಡಿದಾಗ ಅದ್ದುವಿಗೆ ಆಶ್ಚರ್ಯವಾಗುತ್ತದೆ. 'ಜನ್ನತುಲ್ ಫಿರ್‌ದೌಸ್'ದ ವೈಭವವನ್ನು 'ಅಬ್ಬಾ ಸ್ವರ್ಗವೆಂದರೆ ಹೀಗೆಯೇ ಇರುತ್ತದೆಯೇ' ಎಂಬ ರೋಮಾಂಚನ, ದಿಗ್ಭ್ರಮೆಗಳಿಂದ ನೋಡುತ್ತಾನೆ.

ಕಾಸೀಮ್ ಅಮ್ಮ ಹೇಳಿದ ನೋಂಬಿದ್ದ ಹುಡುಗನ ಕತೆ ಕೇಳಿ ಅದ್ದುವಿಗೆ ತಾನು ನೋಂಬು ಮಾಡಬೇಕೆಂಬ ಇಚ್ಛೆಯಾಗುತ್ತದೆ. ಈ ಕತೆಯಲ್ಲಿ 7 ವರ್ಷದ ಹುಡುಗನೊಬ್ಬ ಹಟದಿಂದ ಉಪವಾಸ ಮಾಡಿ ಬಳಲಿ ಕೊನೆಯುಸಿರೆಳೆಯುತ್ತಾನೆ. ಫಕೀರನ ವೇಷದಲ್ಲಿ ಬಂದ ದೂತನೊಬ್ಬ ಅವನನ್ನು ಬದುಕಿಸುತ್ತಾನೆ. ಅದ್ದುವಿನ ತಂದೆ ತಾಯಿಗೆ ಮಗ ನೋಂಬು ಮಾಡುವವನೆಂದಾಗ ಸಂತೋಷ ಆದರೆ ಅವನ್ನು ಆ ದಿನ ಸಾಯಬೇಕಿತ್ತು, ಸಾಯಲಿಲ್ಲವೇಕೆ ಮತ್ತು ಫಕೀರ ಬಂದು ನನ್ನ ಬದುಕಿಸಬೇಕಿತ್ತು ಎಂಬ ಪ್ರಶ್ನೆಗಳು ಸಹಜವಾಗಿ ಬಂದೇ ಬರುತ್ತವೆ. ಆದರೆ ಇದು ಹೊಸದಲ್ಲ, ಅರೆ ನೋಂಬಂದ್ರೆ

ಇದೇ ಏನಮ್ಮ ಹೀಗೆ ನಾವು ತುಂಬಾ ಸಲ ಇದ್ದೆವಲ್ಲಾ ? ಎಂದು ತಾಯಿಯನ್ನು ಪ್ರಶ್ನಿಸುವಲ್ಲಿ ಅವನ ಹಸಿವಿನ ಬಡತನವನ್ನು ಕಾಣಬಹುದು. ನೋಂಬಿನ ದಿನಗಳಲ್ಲಿಯೂ ಕೂಡ ಕಾಸಿಂನ ಭಾವನಿಗೆ ಸಿಗರೇಟ್ ಬೇಕಾಗುತ್ತದೆ. ಸಿಗರೇಟಂ ಕೊಳ್ಳಲು ಹೋದಾಗ ಟೀಕೆಗೆ ಗುರಿಯಾಗುತ್ತಾನೆ. ನಾವು ನಮಾಜು ಮಾಡಿದರು ನಮಗೆ ಬಡತನವೇಕೆ ತಪ್ಪಲಿಲ್ಲ ಎಂಬು ಪ್ರಶ್ನೆ ಅವನನ್ನು ಕಾಣುತ್ತದೆ. ವೈವಾಹಿಕ ಜೀವನದ ವಿರಸದಿಂದ ಕಾಸೀಮ್ ಅಕ್ಕ ಜಮೀಲಳ ಕಾಯಿಯನ್ನು ತಿಂದು ರಮಜಾನ್ ತಿಂಗಳಲ್ಲಿ ಸ್ವರ್ಗದ ಬಾಗಿಲು ತೆರೆದಿರುವುದೆಂದು ಸಾಯುವ ಆಲೋಚನೆ ಮಾಡಿರಬೇಕೆಂಬ ಯೋಜನೆ ಅದ್ದುವಿನಲ್ಲಿ ಬರುತ್ತದೆ. ಬೀಡಿ ಕಾದ್ರಿ ಮನೆ ಬಡತನ ಅನುಭವಿಸುತ್ತಿದ್ದರೂ ತನ್ನ ಮಾನವೀಯ ಗುಣಗಳನ್ನು ಕಳೆದುಕೊಂಡಿಲ್ಲ ಎಂಬುದನ್ನು ಇಲ್ಲಿ ಕಾಣಬಹುದು.

ದೇವನೂರು ಮಹಾದೇವರವರು ದಲಿತ ಸಂವೇದನೆ, ವಿಶಿಷ್ಟ ಅನುಭವ ಆಕಾಂಕ್ಷೆಗಳ ಕತೆಗಾರರಾಗಿದ್ದಾರೆ. 'ಗ್ರಸ್ತ'ರು ಕಥೆಯ ಅವ್ವನಲ್ಲಿ ದಲಿತ ಜನರ ಅಸಹಾಯಕತೆ ಕಂಡು ಬರುತ್ತದೆ. ಗೌಡರು ಉಪಕಾರ ಮಾಡಿದ್ದಾರೆಂದು ತಾಯಿ ಅವರನ್ನು ದೇವರೆಂದು ಪೂಜಿಸುತ್ತಾಳೆ. ಆದರೆ ಗೌಡ ಅವರಿಗೆ ಸಾಲ ಕೊಡುವಾಗ ಹೊಲವನ್ನು ಅಡವಿಟ್ಟುಕೊಂಡು ಬಡ್ಡಿಯ ಮೇಲೆ ಹಣ ನೀಡಿರುತ್ತಾನೆ. ಅವಳೂ ಮಗನಿಗೆ ಬುದ್ಧಿ ಹೇಳುತ್ತಾಳೆ. ಆದರೆ ಗೌಡ ಅವರಿಗೆ ಸಾಲ ಕೊಡುವಾಗ ಹೊಲವನ್ನು ಅಡವಿಟ್ಟುಕೊಂಡು ಬಡ್ಡಿಯ ಮೇಲೆ ಹಣ ನೀಡಿರುತ್ತಾನೆ. ಅವಳು ಮಗನಿಗೆ ಬುದ್ಧಿ ಹೇಳುತ್ತಾಳೆ. ಆದರೆ ಗೌಡರನ್ನು ಎದುರು ಹಾಕಿಕೊಳ್ಳಲು ಆಗುವುದಿಲ್ಲ ಎಂಬ ಸತ್ಯ ಅವಳಿಗೆ ಗೊತ್ತಿರುತ್ತದೆ. ಅವರು ಅದನ್ನು ಪ್ರತಿಭಟಿಸಲಾಗುವುದಿಲ್ಲ. ಏಕೆಂದರೆ ಅವರಲ್ಲಿ ಬಡತನ ಕೀಳರಿಮೆ ಅಸಹಾಯಕತನ ಕಾರಣವಾಗಿರುತ್ತದೆ.

'ಮೂಡಲ ಸೀಮೇಲಿ ಕೊಲೆಗಿಲೆ' ಎಂಬ ಕತೆಯಲ್ಲಿ ಕತೆಯ ನಾಯಕ ರಂಗಪ್ಪನಿಗೆ ಜೋಪಡಿ, ಹೆಂಡತಿ ಮಗ ಬಿಟ್ಟರೆ ತನ್ನದೆನ್ನುವುದಕ್ಕೆ ಏನು ಇಲ್ಲ. ಕಷ್ಟ ಜೀವಿಯಾದರೂ ಅದಕ್ಕೆ ಸರಿಯಾದ

ಪ್ರತಿಫಲವಿಲ್ಲ. ಅವನು ಅವನ ಮಕ್ಕಳು ಹಸಿವಿನಿಂದ ಬಳಲುತ್ತಿರುತ್ತಾರೆ. ರಂಗಪ್ಪನ ಹಟ್ಟಿಯನ್ನು ಆವರಿಸಿಕೊಂಡಿರುವ ದುಃಖ ಮೌನ ಅವನ ಇಡೀ ಜೀವನದಲ್ಲೆ ತುಂಬಿ ಹೋಗಿದೆ. ಹೀಗೆ ರಂಗಪ್ಪ ಒಂದು ಹೊತ್ತಿನ ಕೂಳಿಗೂ ಗತಿಯಿಲ್ಲದ ಕುಟುಂಬದವನಾಗಿರುತ್ತಾನೆ. ಶೋಷಿತ ವರ್ಗಕ್ಕೆ ಬಲಿಪಶುವಾಗಿರುತ್ತಾನೆ. ಇದು ಬಡತನದ ಅತ್ಯುತ್ತಮ ನಿದರ್ಶನವಾಗಿ ನಿಲ್ಲುತ್ತದೆ.

'ಒಡಲಾಳ' ಕತೆಯು ಬಡತನದ ತೀವ್ರತೆಯನ್ನು ತೋರುವಂತ ಪ್ರಮುಖ ಕತೆಯಾಗಿದೆ. ಈ ಕತೆ ನಡೆಯುವುದು ಮೂರು ಹೆಜ್ಜೆಯಲ್ಲಿ. ಮೊದಲಿಗೆ ಸಾಕವ್ವನು ತನ್ನ ತಪ್ಪಿಸಿಕೊಂಡ ಹುಂಜವನ್ನು ಹುಡುಕಾಡುವ ಘಟನೆಯಿಂದ ಆರಂಭವಾಗುತ್ತದೆ. ಅವಳ ಹುಡುಕಾಟ ನೋಡುಗರಿಗೆ ಹಾಸ್ಯಾಸ್ಪದವಾದರೂ ಅವಳ ಮನಸ್ಸಿನ ತೊಳಲಾಟ ಬಡತನ, ದೇವರ ಹುಂಜವಾದರೂ ದೇವರಿಗೂ ಸವಾಲಾಗುವಂತೆ ಅವಳ ವ್ಯಕ್ತಿತ್ವ ಬಡತನದಿಂದ ತುಂಬಾ ನೊಂದು ಬೇಸತ್ತಿರುತ್ತಾಳೆ.

ಇನ್ನೊಂದು ಹೆಜ್ಜೆಯಲ್ಲಿ ಈಕೆಯ ಮೊಮ್ಮಕ್ಕಳು ಬಡತನದಿಂದ ಕೂಡಿರುತ್ತಾರೆ. ಆಸ್ತಿಯ ವಿಷಯವಾಗಿ ತನ್ನ ಮಕ್ಕಳು ಸೊಸೆಯಂದಿರೊಡನೆ ಸದಾ ಜಗಳವಾಡುತ್ತಿರುತ್ತಾಳೆ. ಒಮ್ಮೆ ಮಗ ಕಾಳಣ್ಣ ಒಂದು ಚೀಲ ಕಳ್ಳೇಕಾಯಿ ತರುತ್ತಾನೆ. ಆಗ ಅವರಲ್ಲಿ ಸ್ನೇಹ ಪ್ರೀತಿ ಬಂದು ಜಗಳ ಮರೆಯಾಗುತ್ತದೆ. ಹಸಿವಿನಿಂದ ಕೂಡಿದ ಬದುಕಿನ ಐಕ್ಯತೆ ಇಲ್ಲಿ ಮುಖ್ಯವೆನಿಸುತ್ತದೆ.

ಮೂರನೆಯ ಹೆಜ್ಜೆಯಲ್ಲಿ ಬದುಕಿನ ತುಯ್ದಾಟದಲ್ಲಿ ಮನಸ್ತಾಪ ಮತ್ತು ಅನ್ಯೋನ್ಯತೆಯಲ್ಲಿ ಯಾವುದು ಸಹಜ, ಯಾವುದು ಕಳ್ಳತನ ಎಂದು ಅರಿಯದ ಪೊಲೀಸರು ಮತ್ತು ಸಾಹುಕಾರ ಎತ್ತಪ್ಪ ಹಟ್ಟಿಗೆ ಕಳ್ಳೇಕಾಯಿ ಮೂಟೆಗಾಗಿ ಹುಡುಕಿ ಬರುತ್ತಾನೆ. ಈ ಮೂರು ಹೆಜ್ಜೆಗಳ ನಡುವೆ ನಿಲ್ಲುವ ಕೆಲವು ವಿಷಯಗಳೆಂದರೆ ಬಡತನದ ಬದುಕು ಮತ್ತು ಅವರ ಆಸೆ ಅದರ ಪೂರೈಕೆಯ ಕಲ್ಪನೆ ಸಾಕವ್ವನ ಹುಡುಕಾಟ ಮತ್ತು ಆಕೆಯ ದೇವರ ಕತೆ ಇದರ ಪರಿವೆ ಇಲ್ಲದೆ ಪುಟ್ಟಗೌರಿ ನವಿಲಿನ ಚಿತ್ರ ಬರೆಯುವುದು, ಬಡತನ ಅಸಹಾಯಕತೆ ಸಣ್ಣತನಗಳ ನಡುವೆ ಸಂತೋಷ ನಂಬಿಕೆಗಳಲ್ಲಿ ಜೀವನ ನಡೆಸುವುದನ್ನು ಕಾಣಬಹುದು.

ಕುವೆಂಪುರವರ 'ಧನ್ವಂತರಿ ಚಿಕಿತ್ಸೆ'ಎಂಬ ಕತೆಯಲ್ಲಿ ರೈತನೊಬ್ಬನ ಬಡತನದ ಘೋರ ಚಿತ್ರಣ ಅನಾವರಣಗೊಂಡಿದೆ. ವಿಶ್ವಾಮಿತ್ರನಿಗೆ ದೇವಲೋಕದಲ್ಲಿ ಇದ್ದಾಗ ನರಳುವ ಧ್ವನಿ ಕೇಳಿಸುತ್ತದೆ. ಆ ಅನುಭವ ತನಗೂ ಉಂಟಾಯಿತೆಂದು ಪರಶುರಾಮ ಬಂದು ವಿಶ್ವಾಮಿತ್ರನಲ್ಲಿ ಹೇಳುತ್ತಾನೆ. ಅದರ ನೆಲೆಯನ್ನು ಹುಡುಕಿಕೊಂಡು ಭೂಲೋಕದ ಕಡೆ ಪಯಣ ಬೆಳೆಸುತ್ತಾರೆ. ಅಲ್ಲಿನ ಸ್ಥಿತಿಯನ್ನು ನೋಡಿ ಅವರಿಗೆ ದಿಗ್ಭ್ರಮೆಯುಂಟಾಗುತ್ತದೆ. ಕಣಿವೆಯ ನಡುವೆ ನರಳುವ ತೀವ್ರತೆ ಹೆಚ್ಚಾಗಿ ಕೇಳಿ ಬರುತ್ತಿದ್ದ ಕಡೆಗೆ ಹೋದಾಗ ಅಲ್ಲಿ ರೈತ ಕಾಯಿಲೆಯಿಂದ ನರಳುತ್ತಿರುತ್ತಾನೆ. ಅವನ ಹೆಂಡತಿ ಮಕ್ಕಳಿಗೆ ಊಟವಿಲ್ಲದೆ ಬಡಕಲಾಗಿರುವುದನ್ನು ನೋಡಲು ಅವರು ಬರುತ್ತಾರೆ. ಅವರು ಬಂದಿದ್ದನ್ನು ನೋಡಿ ಸಾಲ ಕೇಳುವವರು ಎಂದು ಆಕೆ ದಿಗ್ಭ್ರಾಂತಳಾಗಿ ಅವರ ಕಾಲಿಗೆ ಬೀಳುವುದು ವ್ಯಂಗ್ಯದ ಪರಂಪರೆಯನ್ನೇ ಹುಟ್ಟುಹಾಕುತ್ತದೆ. ಅನಂತರ ಅವರ ಕಾಯಿಲೆಗೆ ಮದ್ದು ಕೊಡಿಸಲು ಅವರಿಬ್ಬರ ಎಲ್ಲಾ ಪ್ರಯತ್ನ ವ್ಯರ್ಥವಾದಾಗ ಧನ್ವಂತರಿಯನ್ನು ಕರೆಸಿದಾಗ ರೈತನ ನೋವಿಗೆ ಅಲ್ಲಿನ ಸಮಾಜದ ಸ್ಥಿತಿಯೇ ಕಾರಣವಾಗಿರುತ್ತದೆ. ರೈತರ ಬಡತನದ ಚಿತ್ರಣ ಮನಕರಗುವಂತೆ ತಂದಿದ್ದಾರೆ. ಅಧಿಕಾರಶಾಹಿ, ಪಟ್ಟಭದ್ರ ಹಿತಾಸಕ್ತಿಗಳ ಶೋಷಣೆ ಸ್ವಾತಂತ್ರ್ಯಾನಂತರದಲ್ಲೂ ರೈತನ ಎದೆಯ ಮೇಲೆ ನರ್ತಿಸುವ ಭೀಕರ ನೋವಾಗಿ ಪರಿಣಮಿಸುತ್ತದೆ.

ಶ್ರೀಮನ್ಮೂಕವಾಗಿತ್ತು ಎಂಬ ಕತೆಯಲ್ಲಿ ರಂಗ ಮತ್ತು ನಾಗಿ ಬಡತನದಲ್ಲಿ ಜೀವಿಸುತ್ತಿರುತ್ತಾರೆ. ಅವರು ಅಡಿಗೆ ಮಾಡುವಾಗ ಬೆಂಕಿಯ ಬೆಳಕೆ ಅವರಿಗೆ ದೀಪವಾಗಿರುತ್ತದೆ. ಇಲ್ಲಿ ಬಡತನದ ತೀವ್ರತೆಯನ್ನು ನೋಡಬಹುದು. ಎಮ್ಮೆಯನ್ನು ಹುಡುಕಿಕೊಂಡು ಊರೆಲ್ಲ ಅಲೆದು ರಾತ್ರಿಯಿಡೀ ಊರೆಲ್ಲ ಅಲೆಯುತ್ತಾರೆ. ಆ ಮೇಲೆ ಕಾಡಿ ಎಮ್ಮೆಯನ್ನು ಬಿಡಿಸಿಕೊಂಡು ಬರುತ್ತಾರೆ. ಇಲ್ಲಿ ಅವನ ಅಳಲು ಬಡತನದ ಪ್ರತೀಕವಾಗಿದೆ.

ಕೊರಡ್ಕಲ್ ಶ್ರೀನಿವಾಸರಾವ್‌ರವರ 'ಧನಿಯರ ಸತ್ಯನಾರಾಯಣ' ಎಂಬ ಕತೆಯಲ್ಲಿ ಬಡತನದ ಕರುಳಿರುವ ಚಿತ್ರವನ್ನು ಹಿಡಿದಿಟ್ಟಿದ್ದಾರೆ. ಒಮ್ಮೆ ದೇಯಿ, ತುಕ್ರಿ, ಬೂದ ಎಲ್ಲರೂ ತಾಯಿ ಮನೆಗೆ

ಜಾತ್ರೆಗೆ ಹೋಗಿದ್ದಾಗ ಅಲ್ಲಿ ಬಾಳೆಹಣ್ಣನ್ನು ತಿಂದು ಅದನ್ನು ತಮ್ಮ ಮನೆಯಲ್ಲೂ ಹಾಕುವ ಯೋಚನೆ ಮಾಡಿ ಆ ಪುಟ್ಟ ಜೀವಗಳು ಒಂದು ಬಾಳೆ ಕಂದನ್ನು ತನ್ನ ಮಾವನಿಂದ ಕಾಡಿ ಬೇಡಿ ಅದನ್ನು ಹೊರಲಾರದೇ ಹೊತ್ತುಕೊಂಡು ಬರುತ್ತಾರೆ. ತನ್ನ ತಂದೆ ತೌಡನಿಂದ ಅದನ್ನು ಪಡೆದುಕೊಂಡು ನೆಡಿಸುತ್ತಾರೆ. ಆದರೆ ಅದು ಸಾಹುಕಾರರ ಜಮೀನಾಗಿರುತ್ತದೆ. ಪ್ರತಿನಿತ್ಯ ತುಕ್ರಿ, ಬೂದ ಅದನ್ನು ನೋಡಿಕೊಂಡು ಬೇಲಿ ಹಾಕಿ ಚೆನ್ನಾಗಿ ಬೆಳೆಸುತ್ತಾರೆ. ಆದರೆ ಆ ಜಮೀನಿನ ಯಜಮಾನನು ಅದನ್ನು ಸತ್ಯನಾರಾಯಣ ಪೂಜೆಗೆ ತರಲು ಹೇಳಿ ಕಳುಹಿಸುತ್ತಾನೆ. ತೌಡನ ಮನಸ್ಸಿನಲ್ಲಿ ತುಂಬಾ ದುಃಖವಾಗುತ್ತದೆ. ಅದನ್ನು ಕೊಟ್ಟು ಕಳುಹಿಸಿದ ನಂತರ ಅವರ ಮಕ್ಕಳ ಗೋಳು ಮನಕರಗುವಂತದ್ದಾಗಿದೆ. ಇಲ್ಲಿ ಬಡತನದ ಬೇನೆಯನ್ನು ಅನುಭವಿಸಿ ಹೇಳುವ ರೀತಿಯಲ್ಲಿ ಮನಮುಟ್ಟುವಂತೆ ಕತೆ ರಚಿಸಿದ್ದಾರೆ.

ಒಟ್ಟಿನಲ್ಲಿ ಬಡತನದ ಪರಿಕಲ್ಪನೆ ಈ ಮೇಲಿನ ಎಲ್ಲಾ ಕತೆಗಳಲ್ಲೂ ಸೊಗಸಾಗಿ ಚಿತ್ರಣಗೊಂಡಿದೆ. ಸಮಾಜದ ವಿಭಿನ್ನ ಮುಖಗಳನ್ನು ವಿಶಿಷ್ಟ ಆಯಾಮಗಳಲ್ಲಿ ಸೆರೆಹಿಡಿಯುವ ಪ್ರಯತ್ನ ಇಲ್ಲಿ ನಡೆದಿದೆ.

## ಅಧ್ಯಾಯ - 4

## ಆರ್ಥಿಕ ಬಡತನದ ಪರಿಕಲ್ಪನೆ

ಆಧುನಿಕ ಕನ್ನಡ ಕಥಾ ಸಾಹಿತ್ಯದಲ್ಲಿ ಆರ್ಥಿಕ ಬಡತನದ ಪರಿಕಲ್ಪನೆ ಬಗ್ಗೆ ಹಲವಾರು ಕತೆಗಾರರು ವಸ್ತುವಾಗಿಟ್ಟುಕೊಂಡು ಕತೆ ರಚಿಸಿದ್ದಾರೆ. ಆರ್ಥಿಕವಾಗಿ ಹಿಂದುಳಿದಿರುವ ಜನಸಮುದಾಯದ ಬಗ್ಗೆ ಆರ್ಥಿಕವಾಗಿ ಹೇಗೆ ಬಡತನವನ್ನು ಅನುಭವಿಸುತ್ತಿದ್ದಾರೆ ಎಂಬುದನ್ನು ಬಡತನದ ಪರಿಕಲ್ಪನೆಯಲ್ಲಿ ಒಂದು ಪ್ರಮುಖ ಅಂಶವಾಗಿ ಅಧ್ಯಯನ ಮಾಡಲಾಗಿದೆ. ಆರ್ಥಿಕ ಬಡತನದ ಪರಿಕಲ್ಪನೆಯ ಬಗ್ಗೆ ಬಸವರಾಜ ಕಟ್ಟೀಮನಿಯವರ ಹೊಸ ವರುಷದ ಹಳೆಯ ರಾತ್ರಿ, ನಿರಂಜನರ ಕಾಯಶ್ರೀಗೌರಿ ಮತ್ತು 'ಅವರು' ಕತೆಗಳು, ನಿರಂಜನರ ಕೊನೆಯ ಗಿರಾಕಿ, ಚದುರಂಗರ ಬಣ್ಣದ ಬೊಂಬೆ, ಕೋರಡ್ಕಲ್, ಶ್ರೀನಿವಾಸರಾವ್‌ರವರ ಧನಿಯರ ಸತ್ಯನಾರಾಯಣ, ಕುಂ.ವೀ. ರವರ ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ ಮತ್ತು 'ದೇವರ ಹೆಣ' ಕತೆಗಳಲ್ಲೂ ಆ ಬಡತನದ ಪರಿಕಲ್ಪನೆ ಹೇಗೆ ವ್ಯಕ್ತವಾಗಿದೆ ಎಂಬುದನ್ನು ನೋಡಲಾಗಿದೆ.

'ಹೊಸ ವರ್ಷದ ಹಳೆಯ ರಾತ್ರಿ' ಕತೆ ಹೆಚ್ಚು ಕಡಿಮೆ ಈ ತೆರನಾದದ್ದೇ ಆದರೆ ಈ ಕತೆಯು ಅದಕ್ಕಿಂತ ಹೆಚ್ಚು ಪರಿಣಾಮಕಾರಿಯಾದುದ್ದಾಗಿದೆ. ಕಾರವಾನ್ ಕಥಾ ಸಂಕಲನದಿಂದ ಈ ಕಥೆಯನ್ನು ಆಯ್ದುಕೊಳ್ಳಲಾಗಿದೆ. ಆರ್ಥಿಕ ಬಡತನದ ಬಗ್ಗೆ ತಿಳಿಸುವ ಕಥೆಗಳಲ್ಲಿ ಇದು ಪ್ರಮುಖವಾದುದ್ದಾಗಿದೆ. ಆರ್ಥಿಕ ಬಡತನದಿಂದ ನರಳುತ್ತಿರುವ ಬಡಜನರ ದಿನ ನಿತ್ಯದ ಜೀವನದ ಗತಿಯನ್ನು ಈ ಕತೆ ಹೇಳುತ್ತದೆ. ಇದಕ್ಕೆ ಕಾರಣ ಅವರಲ್ಲಿ ಕಂಡುಬರುವ ಆರ್ಥಿಕ ಸಮಸ್ಯೆ.

ಕರಿಯ ಒಬ್ಬ ಸಾಮಾನ್ಯ ಕೂಲಿಕಾರ. ಗುಡಿಸಲಿನಲ್ಲಿ ವಾಸವಾಗಿರುತ್ತಾನೆ. ಹೊಸ ವರುಷದ ಆ ದಿನದಂದು ಅವರ ಪಕ್ಕದಲ್ಲೆ ಇದ್ದ ಶ್ರೀಮಂತರ ಸೌಧದಲ್ಲಿ ಹಬ್ಬದ ಸಂಭ್ರಮ ಎಲ್ಲೆಲ್ಲೂ ಸಂತಸದ ವಾತಾವರಣ. ಹಬ್ಬದ ಖುಷಿಯಲ್ಲಿ ಎಲ್ಲಾ ಮೈಮರೆಯುತ್ತಾರೆ. ಎಲ್ಲೆಡೆಯು ರಜಾ, ಅವರವರ ಮನೋ ಇಚ್ಛೆಯಂತೆ ವರ್ತಿಸುವ ಈ ಜನಗಳ ಮಧ್ಯೆ ಬಡವರ ಕೂಗು ಕೇಳಿಸುವುದಿಲ್ಲ. ಇಂತಹದೇ ಸ್ಥಿತಿಯಲ್ಲಿ ಕರಿಯ ಕೂಲಿಕಾರ ತನ್ನ ಮಗನಿಗೆ ಹಸಿವನ್ನು ತೀರಿಸಲು ಆಗದಂತಹ ಸ್ಥಿತಿಯಲ್ಲಿ ಇರುತ್ತಾನೆ. ಒಂದು ಹೊತ್ತಿನ ಕೂಳಿಗೂ ಪರಿತಪಿಸುವ ಈ ಜನಗಳ ಮಧ್ಯೆ ಹಣವನ್ನು ವ್ಯರ್ಥವಾಗಿ ಖರ್ಚುಮಾಡಿ ಆಡಂಬರ ಜೀವನ ನಡೆಸುತ್ತಿರುವ ವರ್ಗವಾಗಿ ಶ್ರೀಮಂತ ವರ್ಗವನ್ನು ಇಲ್ಲಿ ಕಾಣಬಹುದಾಗಿದೆ.

ಹೊಸ ವರುಷದ ಮುನ್ನಾ ದಿನ ಅಂದು ಎಲ್ಲೆಡೆಯು ಸಂಭ್ರಮದ ವಾತಾವರಣ, ದಿನಗೂಲಿ ಮಾಡುವಂತಹ ಕರಿಯನ ಗುಡಿಸಲಿನಲ್ಲಿ ಎಲ್ಲಾ ದಿನಗಳು ಒಂದೇ ಆಗಿರುತ್ತದೆ. ಯಾವುದೇ ಹಬ್ಬ ಹರಿದಿನಗಳ ಬಗ್ಗೆ ಅವರಿಗೆ ಅರಿವೇ ಇರುವುದಿಲ್ಲ. ಏಕೆಂದರೆ ಅವರಲ್ಲಿ ಹಣದ ಕೊರತೆ. ದಿನಗೂಲಿಯಿಂದಲೂ ಅವರು ಒಂದು ಹೊತ್ತಿನ ಕೂಳನ್ನು ಹೊಂದುವುದು ಕಷ್ಟವಾಗಿರುತ್ತದೆ. ಇಂತಹ ಸ್ಥಿತಿಯಿರುವಾಗ ಅವರಿಗೆ ಹೊಸ ವರುಷದ ಸಂಭ್ರಮ ಕೇವಲ ಕಲ್ಪನೆ. ಅವರು ಹಸಿವು ತೀರಿದ ದಿನವೇ ಅವರಿಗೆ ಹೊಸ ವರುಷದ ಹಬ್ಬದ ದಿನವಾಗಿರುತ್ತದೆ. ಎಲ್ಲಾ ದಿನವು ಅವರಿಗೆ ಒಂದೇ ದಿನ. ಪ್ರತಿನಿತ್ಯ ಹೊಸ ಹೊಸ ದುಃಖಗಳನ್ನು ಅನುಭವಿಸುತ್ತಿರುತ್ತಾರೆ.

ಕಥೆಯಲ್ಲಿ ಬಡಕುಟುಂಬದ ಜೀವನದ ಬಗ್ಗೆ ಚಿತ್ರಿಸುವಾಗ ಶ್ರೀಮಂತರ ಹೋಲಿಕೆಯನ್ನು ತಂದುಕೊಂಡಿದ್ದಾರೆ. ಆರ್ಥಿಕವಾಗಿ ಇವರ ಸ್ಥಿತಿ ತುಂಬಾ ಶೋಚನೀಯವಾಗಿದೆ. ಹೊಸ ವರುಷವನ್ನು ಆಚರಿಸುವಾಗ ಹೊಸ ಬದುಕನ್ನು ಬದುಕುವುದಾಗಲೀ ಬಡಜನರಿಗೆ ಸಾಧ್ಯವಿಲ್ಲ ಎಂಬುದು ಈ ಕಥೆಯ

ಪ್ರಮುಖ ಅಂಶವಾಗಿದೆ. ಈ ಕತೆಯು ಬಸವರಾಜ ಕಟ್ಟೀಮನಿಯವರ ಬದುಕಿನ ಪ್ರತಿಬಿಂಬದ ಕತೆಯಾಗಿದೆ ಎಂದು ಶೇಷಗಿರಿರಾವ್ ಹೇಳುತ್ತಾರೆ. ಈ ಕಥೆಯಲ್ಲಿ ಪ್ರಮುಖವಾಗಿ ಕಾಣುವ ಅಂಶ ಆರ್ಥಿಕ ಸಮಸ್ಯೆಯಾಗಿದೆ. ಆರ್ಥಿಕವಾಗಿ ಬಡವಾದ ಕುಟುಂಬದ ಚಿತ್ರಣ ಈ ಕತೆಯಲ್ಲಿದೆ.

ನಿರಂಜನರವರು ಕೆಲವಾರು ಕಥೆಗಳಲ್ಲಿ ಆರ್ಥಿಕ ಬಡತನ, ಅದನ್ನು ಹಿಂಬಾಲಿಸಿ ಬರುವ ಸಮಸ್ಯೆಗಳನ್ನು ತಮ್ಮ ಕಥೆಗಳಲ್ಲಿ ವಸ್ತುವಾಗಿರಿಸಿಕೊಂಡಿದ್ದಾರೆ. ನಿರಂಜನರು ಕಟ್ಟೀಮನಿಯವರಂತೆ ಆರ್ಥಿಕವಾಗಿ ಬಡತನದ ಪರಿಕಲ್ಪನೆಯನ್ನು ಒಳಗೊಂಡಿರುವ ಕಥೆಗಳನ್ನು ರಚಿಸಿದ್ದಾರೆ. ಹಸಿವು ಬಡತನ ಇವರ ಕಥೆಗಳ ವಸ್ತುವಾಗಿಸಿದ್ದಾರೆ.

ಕಾಯಾ ಶ್ರೀ ಗೌರಿ: ಬರಗಾಲದ ಸಮಯದಲ್ಲಿ ಉಂಟಾಗುವಂತಹ ಅನಾಹುತಗಳ ಬಗ್ಗೆ ಈ ಕಥೆ ತಿಳಿಸಿಕೊಡುತ್ತದೆ. ಇದರಿಂದಾಗಿ ಎಷ್ಟೋ ಸಂಸಾರಗಳು ಹಾಳಾಗುವ ಸ್ಥಿತಿಯನ್ನು ಕಾಣುತ್ತೇವೆ. ಇದೇ ವಸ್ತುವನ್ನಿಟ್ಟುಕೊಂಡು ನಿರಂಜನರು ಈ ಕಥೆಯಲ್ಲಿ ವಿವರಿಸುತ್ತಾರೆ.

ಚೆನ್ನಿ ಮತ್ತು ಅವಳ ಗಂಡ ಮಕ್ಕಳು ಇಲ್ಲಿ ಕಥೆಯ ಕೇಂದ್ರ ವ್ಯಕ್ತಿಗಳಾಗಿದ್ದಾರೆ. ಬರಗಾಲದ ಪರಿಣಾಮವಾಗಿ ಇವರು ಮೈಸೂರಿಗೆ ವಲಸೆ ಬರುತ್ತಾರೆ. ಹೀಗೆ ವಲಸೆ ಬಂದ ಇವರು ಕೆಲಸಕ್ಕಾಗಿ ಅಲೆಯುತ್ತಾರೆ. ಆದರೆ ಯಾವುದೇ ಕೆಲಸ ಇವರಿಗೆ ದೊರೆಯುವುದಿಲ್ಲ. ದುಡಿದರೆ ಕೂಲಿಯ ಹಣದಿಂದ ಊಟ, ಇಲ್ಲದಿದ್ದರೆ ಉಪವಾಸ. ಆದರೆ ಇಲ್ಲಿ ಕೂಲಿ ಕೆಲಸವು ಇವರಿಗೆ ದೊರೆಯದ ಕಾರಣದಿಂದಾಗಿ ಹಸಿವಿನ ಬೇಗೆಯನ್ನು ತಾಳಲಾರದೆ ತನ್ನ ಮಕ್ಕಳನ್ನು ಮಾರುತ್ತಾರೆ. ಇಲ್ಲಿ ಇವರ ಬಡತನದ ತೀವ್ರತೆಯ ಪರಿಕಲ್ಪನೆಯನ್ನು ನಾವು ಕಾಣುತ್ತೇವೆ.

ಮಕ್ಕಳನ್ನು ಮಾರುವುದು ಅವರ ಹಸಿವನ್ನು ತೀರಿಸಿಕೊಳ್ಳಲು ಅಲ್ಲ. ಮಕ್ಕಳು ಹಸಿವಿನಿಂದ ನರಳುತ್ತಿರುವುದನ್ನು ನೋಡಲಾಗದೇ ಅವುಗಳು ಬೇರೆ ಎಲ್ಲಾದರೂ ಅನ್ನ ಸಿಕ್ಕಿ ಅವು ಬದುಕಲಿ ಎಂಬುದು ಇದರ ಹಿಂದಿನ ಉದ್ದೇಶವಾಗಿರುತ್ತದೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿ ಇದ್ದರೆ ಅವರು ಮಕ್ಕಳನ್ನು ಮಾರುತ್ತಿರಲಿಲ್ಲ. ಯಾವುದೇ ರೀತಿಯಾದ ಆದಾಯವಿಲ್ಲದ ಕಾರಣದಿಂದ ವಿಧಿಯಿಲ್ಲದೆ ಅವರು ಮಕ್ಕಳನ್ನು ಮಾರುತ್ತಾರೆ. ಆರ್ಥಿಕವಾಗಿ ಇಲ್ಲಿ ಬಡತನದ ಪರಿಕಲ್ಪನೆಯನ್ನು ಹಸಿವಿನ ಮುಖಾಂತರ ಹೇಳಲು ಹೊರಟಿದ್ದಾರೆ. ಬರಗಾಲದ ಸ್ಥಿತಿಯಲ್ಲಿನ ಜನರ ಜೀವನವನ್ನು ಕಾಣುತ್ತೇವೆ. ಇಂತಹ ಪರಿಸ್ಥಿತಿಯಲ್ಲಿ ಅವರು ಜೀವನ ಮಾಡಲು ಹೇಗೆ ಸಾಧ್ಯವಾಗುತ್ತದೆ. ಯಾವುದೇ ಜನರ ಆರ್ಥಿಕ ಸಹಾಯವಿಲ್ಲದೆ ಚೇತರಿಸಿಕೊಳ್ಳಲು ಅಸಾಧ್ಯ. ತಂದೆ ತಾಯಿಗಳು ಮಕ್ಕಳನ್ನು ಮಾರಿ ತಾವು ತಮ್ಮ ಜೀವನವನ್ನು ಬಲಿ ಕೊಡುವ ಸ್ಥಿತಿಯು ಬಡತನದ ಭೀಕರತೆಯ ಪರಿಕಲ್ಪನೆಯನ್ನು ಇಲ್ಲಿ ಕಾಣಲಾಗುತ್ತದೆ.

'ಕೊನೆಯ ಗಿರಾಕಿ' ಎಂಬ ಕಥೆಯಲ್ಲಿ ಆರ್ಥಿಕ ಬಡತನದಿಂದಾಗಿ ಒಂದು ಹೆಣ್ಣಿನ ಜೀವನ ಯಾವ ರೀತಿ ಅಂತ್ಯವಾಗುತ್ತದೆ ಎಂಬುದನ್ನು ಈ ಕಥೆಯು ಹೇಳುತ್ತದೆ. ಆರ್ಥಿಕವಾಗಿ ಬಡವರಾದ್ದರಿಂದ ಅವರ ಕುಟುಂಬವೇ ಛಿದ್ರವಾಗಿ ಆ ಹೆಣ್ಣುಮಗುವು ಬೀದಿ ಪಾಲಾಗುತ್ತಾಳೆ. ಸಹೃದಯದಿಂದ ವಿಮರ್ಶಕರಿಂದ ಬಹು ರೀತಿಯಲ್ಲಿ ಪ್ರಶಂಸೆಗೆ ಒಳಗಾದ ಕಥೆಯಿದು.

ಕಾಣಿ ಇಲ್ಲಿ ಕಥೆಯ ಕೇಂದ್ರ ಬಿಂದು. ಮೂಕಿಯಾದ ಹೆಣ್ಣು ಎಲ್ಲರಂತೆ ತಂದೆ ತಾಯಿ ಅಣ್ಣಂದಿರಿಂದ ಬೆಳೆದವಳು. ತೀವ್ರವಾದ ಬಡತನದ ಕಾರಣವಾಗಿ ಪಟ್ಟಣಕ್ಕೆ ವಲಸೆ ಬರುತ್ತಾರೆ. ಆರ್ಥಿಕ ಬಡತನದ ಕಾರಣದಿಂದಾಗಿ ಒಬ್ಬೊಬ್ಬರು ಒಂದೊಂದು ದಿಕ್ಕಾಗುತ್ತಾರೆ. ಅನಂತರ ಕಾಣಿಯು ಒಂದು ದಿಕ್ಕಾಗುತ್ತಾಳೆ. ಹಸಿವನ್ನು ತಾಳಲಾರದೆ ಯಾರು ಕರೆಯುತ್ತಾರೊ ಅವರ ಹಿಂದೆ ಹೋಗಲು ಶುರು

ಮಾಡಿದಳು. ಆದರೆ ಅಂದಿನ ಸಮಾಜದಲ್ಲಿನ ಕೆಲವರು ದುಷ್ಟ ವ್ಯಕ್ತಿಗಳ ಪಾಲಿಗೆ ಬಲಿಯಾಗುತ್ತಾಳೆ. ಇದು ಬಡ ಹೆಣ್ಣುಮಗಳನ್ನು ಸ್ವಾರ್ಥ ಪುರುಷ ಜನಾಂಗವು ಬಳಸಿಕೊಳ್ಳುವ ಕ್ರೂರ ವ್ಯವಸ್ಥೆಯನ್ನು ಇಲ್ಲಿ ಕಾಣುತ್ತೇವೆ. ಅವರ ಕುಟುಂಬ ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದರೆ ಬಹುಶಃ ಇಂತಹ ಘಟನೆ ನಡೆಯುತ್ತಿರಲಿಲ್ಲ. ಕಾಣಿಯು ಸ್ವಾರ್ಥ ಪುರುಷ ಸಮಾಜದ ಕಾಮತೃಷೆಗೆ ಬಲಿಯಾಗುತ್ತಿರಲಿಲ್ಲ ಎನಿಸುತ್ತದೆ. ಜೀವನದಲ್ಲಿ ಪ್ರೀತಿಯಿಂದ ನೋಡಿಕೊಂಡವನು ಎಂದರೆ ಮೊಂಡು ಕೈ ಭಿಕ್ಷುಕ. ಅವನು ಇವಳನ್ನು ಬಿಟ್ಟುಹೋದ ನಂತರ ಅವಳ ಪರಿಸ್ಥಿತಿ ಬರ್ಬರವಾಗಿದೆ. ಒಂದು ತುತ್ತಿನ ಅನ್ನಕ್ಕಾಗಿ ಅವಳ ಮೈಮಾರಿ ಬದುಕುವ ದರಿದ್ರ ಬದುಕನ್ನು ಅವಳು ಅನುಭವಿಸುವ ಚಿತ್ರಣ ಮನಕರಗುವಂತೆ ಇದೆ. ಅವಳ ಸ್ಥಿತಿಯ ಕಠೋರ ಚಿತ್ರಣವನ್ನು ಭಾಷೆಯ ನಿರುದ್ವೇಗದಿಂದ ಚಿತ್ರಿಸಿದ್ದಾರೆ. ಕತೆಗಾರನ ಯಶಸ್ಸಿರುವುದೇ ಇಲ್ಲಿ. ಯಾವ ಕಡೆಗೂ ಪಾಲುದಾರಿಕೆ ವಹಿಸದೇ ನಿರ್ಲಿಪ್ತತೆಯಿಂದ ವಿವರಿಸುವ ಕತೆಗಾರನ ಮನಸ್ಸು ರೋಷ, ಅನುಕಂಪ, ಹತಾಶೆಗಳನ್ನು ಸಮ್ಮಿಳಿತಗೊಳಿಸಿಕೊಂಡು ಭಾಷೆಯಲ್ಲಿ ಹಿಡಿದು ಕೊಟ್ಟಿದೆ.

ಸರ್ಕಲಿನಲ್ಲಿ ಅವಳ ದೇಹ ಒಬ್ಬ ದಡಿಯನ ಪಶುತ್ವಕ್ಕೆ ಕೊನೆಯದಾಗಿ ಬಲಿಯಾಗುತ್ತದೆ. ಅವಳ ಕಳೆಬರಹವನ್ನು ಕೂಡ ಆಹಾರಕ್ಕಾಗಿ ಹವಣಿಸುವ ಗಿಡುಗನ ಪ್ರಸ್ತಾಪ ಇದೇ ಕಥೆಗೆ ಒಂದು ರೀತಿಯಾದ ಸ್ಪಷ್ಟ ಕಾಣ್ಕೆಯನ್ನು ತಂದುಕೊಡುತ್ತದೆ. ಮುಗ್ಧ ಕಾಣಿಗೆ ಪ್ರತಿಭಟಿಸುವ ಸ್ವರವೇ ಇಲ್ಲ. ಬಡ ಜೀವದ ರಕ್ಷಣೆಯ ಜವಾಬ್ದಾರಿಯನ್ನು ಹೊರಬೇಕಾಗಿದ್ದ ಸಮಾಜವು ಮೂಕ, ಕುರುಡು, ಹೃದಯಹೀನ, ಇಂಥವಳನ್ನು ಕೊನೆಗೆ ಗಿಡುಗವು ಸಮೀಪಿಸುವುದರಲ್ಲಿ ವ್ಯಕ್ತವಾಗುವ ಕಟುವ್ಯಂಗ್ಯವು ನಮ್ಮ ಕ್ರೂರ ವ್ಯವಸ್ಥೆಯನ್ನು ಕಟುವಾಗಿ ಟೀಕಿಸುವಂತೆ ಮಾಡಿದೆ. ಶೋಷಿತರ ಪರ ಲೇಖಕನ ದನಿ ಹೆಚ್ಚು ನಿರ್ಧಿಷ್ಟತೆಯಿಂದ ಕೇಳುವಂತಾಗುತ್ತದೆ.

ಕಾಣಿಯನ್ನು ಬಹಳಷ್ಟು ಜನರು ಅನುಭೋಗಿಸುತ್ತಾರೆ. ಕತೆ ಅವಳ ದುರಂತವನ್ನು ಹಂತ ಹಂತವಾಗಿ ನಿರೂಪಿಸುತ್ತದೆ. ಅವಳಿಗೇ ಗೊತ್ತಿಲ್ಲದ ಸತ್ಯಗಳು ಕತೆಗಾರನಿಂದ ವ್ಯಕ್ತವಾಗುತ್ತಾ ಹೋಗುತ್ತದೆ. ಅವಳ ಹಸಿವು, ಆರ್ಥಿಕ ಬಡತನ, ಪ್ರಕೃತಿ ಮಾಡಿದ ಮೋಸ, ಹಾಗೂ ಸಮಾಜ ಮಾಡುವ ಮೋಸ ಇವೆರಡು ಅವಳನ್ನು ಒಂದೇ ಸಂದರ್ಭದಲ್ಲಿ ಹಿಂಸಿಸುತ್ತದೆ.

ಈ ಕತೆಯ ಬಗೆಗಿನ ಹಲವು ವಿಮರ್ಶಕರ ಮಾತುಗಳನ್ನು ಗಮನಿಸಿದರೆ ಕತೆಯ ಮಹತ್ವ ಇನ್ನೂ ಚೆನ್ನಾಗಿ ತಿಳಿಯಪಡಿಸುತ್ತದೆ. ವ್ಯವಸ್ಥೆಯ ಕ್ರೂರ ದಬ್ಬಾಳಿಕೆ ಬಡತನದ ಚಿತ್ರಣವನ್ನು ಚಿತ್ರಿಸುವಲ್ಲಿ ಸಂಕಟ ತೋರುವ ಈ ಕತೆಯ ವಸ್ತು ನಿರಂತರ ಶೋಷಣೆಯನ್ನೊಳಗೊಂಡ ಸಮಾಜವೊಂದರ ಊನವನ್ನು ಹೇಳುತ್ತದಾದರೂ ಕತೆ ಹೇಳುವ ಶೈಲಿ ಹಾಗೂ ತಂತ್ರದಲ್ಲೂ ಯಶಸ್ವಿಯಾದದ್ದಾಗಿದೆ. ಆರ್ಥಿಕ ಬಡತನದಿಂದಾಗಿ ನರಳುತ್ತಿರುವ ಬಡಜನರ ಜೀವನದ ವಿವಿಧ ಮಗ್ಗುಲುಗಳನ್ನು ತೆರೆದು ತೋರುವುದರಲ್ಲಿ ಇದೂ ಕೂಡ ಒಂದಾಗಿದೆ.

'ಅವರು' ಎಂಬ ಕತೆಯಲ್ಲಿ ನಿರಂಜನರ ವಿಶಿಷ್ಟ ಕಾಣ್ಕೆಯಿದೆ. ಹಸಿವು ಆರ್ಥಿಕ ಬಡತನದ ಚಿತ್ರಣವನ್ನು ದುರಂತ ವ್ಯಂಗ್ಯವನ್ನು ಈ ಕಥೆಯ ಮೂಲಕ ಕಟ್ಟಿಕೊಡಲಾಗಿದೆ. ನಿರೂಪಕನ ತಾಯಿಗೆ ಕಾಯಿಲೆ, ಅದನ್ನು ನೋಡಲು ಯಾವುದೇ ಜನರು ಬರುವುದಿಲ್ಲ. ಆರ್ಥಿಕವಾಗಿ ಅವರು ತುಂಬಾ ಬಡವರು, ಕಾಯಿಲೆಗೆ ಮದ್ದು ಕೊಡಿಸಿಕೊಳ್ಳಲಾರದಷ್ಟು ಅವರಲ್ಲಿ ಆರ್ಥಿಕ ಸಮಸ್ಯೆ ಹೆಚ್ಚಾಗಿರುತ್ತದೆ. ಇವರು ತುಂಬಾ ಕಡು ಬಡವರು. ಇಂತಹ ಸಂದರ್ಭದಲ್ಲಿ ಅವರಿಗೆ ಸಹಾಯಕ್ಕೆ ಬರುವವರು ಒಮ್ಮೆ ಪ್ರವಾಸದಲ್ಲಿ ಭೇಟಿಯಾದಂತಹ ಬಡವರಾದರೂ ಸರಳ ಹೃದಯಿಗಳು. ಬಡತನದಲ್ಲಿ ಬೆಂದು

ಬೆಂಡಾಗಿದ್ದರೂ ಹೃದಯವುಳ್ಳ ಜನರಾಗಿದ್ದಾರೆ. 'ಅವರು' ಎಂಬ ಪರಕೀಯ ಭಾವನೆಯನ್ನು ಇಲ್ಲಿ ಮಾನವೀಯತೆಯೊಂದಿರುವ ಜನಗಳಾಗಿ ಕಂಡುಬರುತ್ತಾರೆ. ಇಲ್ಲಿ ಆರ್ಥಿಕವಾಗಿ ಬಡತನದ ಪರಿಕಲ್ಪನೆಯನ್ನು ತನ್ನ ಪ್ರಾಬಲ್ಯವನ್ನು ಮೆರೆಯುತ್ತಿದೆ ಎಂಬುದನ್ನು ತಿಳಿಸುತ್ತದೆ. ಹಸಿವು ಬಡತನದ ಚಿತ್ರಣ ಈ ಕಥೆಯ ಪ್ರಮುಖ ಅಂಶವಾಗಿ ಕಂಡುಬಂದಿರುತ್ತದೆ.

ಆರ್ಥಿಕ ಬಡತನದ ಪರಿಕಲ್ಪನೆಯು ಇಲ್ಲಿ ಹೇಗೆ ವ್ಯಕ್ತಗೊಂಡಿದೆ ಎಂದರೆ ನಿರೂಪಕನ ತಾಯಿಗೆ ರೋಗ ಗುಣಪಡಿಸಲು ಅವರಲ್ಲಿ ಯಾವುದೇ ಹಣವಿಲ್ಲ. ಹಣವನ್ನು ಹೊಂದಿಸುವ ಸಾಮರ್ಥ್ಯವು ಇರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಬಡವರೇ ಆದ ಸ್ನೇಹಿತರು ಸಹಾಯ ಮಾಡುತ್ತಾರೆ. ಬಡವರಿಗೆ ಬಡವರೇ ದಿಕ್ಕು ಎಂಬುದು ಈ ಕಥೆಯಲ್ಲಿ ಎದ್ದು ಕಾಣುವಂತಹ ಪ್ರಮುಖ ಅಂಶವಾಗಿದೆ ಎಂದು ಹೇಳಬಹುದು. ಬಡವರಾದರೂ ಅವರಲ್ಲಿ ಮಾನವೀಯತೆ, ಅನುಕಂಪ, ಕರುಣೆ ಇರುತ್ತದೆ. ಸಹಾಯ ಮನೋಭಾವ, ಇದ್ದದ್ದರಲ್ಲೇ ಹಂಚಿಕೊಂಡು ಬಾಳುವ ಅಂಶಗಳು ಅವರ ಗುಣಗಳಾಗಿರುತ್ತವೆ. ಶ್ರೀಮಂತ ವರ್ಗದವರಿಗೆ ಬಡವರ ಮೇಲೆ ಅನುಕಂಪವಿಡುವುದಕ್ಕಿಂತಲೂ ಹೆಚ್ಚಾಗಿ ಅವರ ಕಡೆ ದೃಷ್ಟಿ ಹಾಯಿಸುವಷ್ಟು ಸೌಜನ್ಯತೆ ಕೂಡ ಅವರಿಂದ ತುಂಬಾ ದೂರವಾಗಿರುತ್ತದೆ. ಆರ್ಥಿಕವಾಗಿ ಹಿಂದುಳಿದ ಬಡಜನರ ಪರಿಕಲ್ಪನೆಯನ್ನು ಇಲ್ಲಿ ಕಾಣಬಹುದಾಗಿದೆ.

ಚದುರಂಗರು ಕನ್ನಡ ಕಥಾ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಕೆಲವೊಂದು ಕಥೆಗಳಲ್ಲಿ ಬಡತನದ ದುಃಸ್ಥಿತಿಯನ್ನು ಕಾಣಬಹುದು. ಅವುಗಳಲ್ಲಿ ಬಣ್ಣದ ಬೊಂಬೆ ಎಂಬ ಕಥೆಯು ಪ್ರಮುಖವಾದುದ್ದಾಗಿದೆ.

ಬಣ್ಣದ ಬೊಂಬೆ ಕಥೆಯಲ್ಲಿ ಚಿಕ್ಕಮಕ್ಕಳ ಮನೋಭಾವದ ಚಿತ್ರಣವನ್ನು ಕಾಣಬಹುದು. ಈ ಕಥೆಯ ಕೇಂದ್ರದಲ್ಲಿ ಇಬ್ಬರು ಚಿಕ್ಕ ಹುಡುಗಿಯರು ಬರುತ್ತಾರೆ. ಒಬ್ಬಳ ಹೆಸರು ವನಜ, ಬ್ಯಾಂಕ್ ಮ್ಯಾನೇಜರೊಬ್ಬರ ಮಗಳಾದ ಇವಳು ಇರುವುದು ಬಂಗಲೆಯಲ್ಲಿ. ಇನ್ನೊಬ್ಬಳು ಪುಟ್ಟರಂಗಿ ಇವಳು ಇರುವುದು ವನಜಳ ಮನೆಯ ಎದುರಿನ ಜೋಪಡಿಯೊಂದರಲ್ಲಿ. ವನಜಳಿಗೆ ಆರೋಗ್ಯವಿಲ್ಲ, ಶ್ರೀಮಂತಿಕೆಯಿದೆ. ಆದರೆ ಪುಟ್ಟರಂಗಿ ಆರೋಗ್ಯವಂತೆ ಆದರೆ ಆರ್ಥಿಕ ಬಡತನವನ್ನು ಕಾಣಬಹುದು. ಚಿಕ್ಕಮಕ್ಕಳು ಇವರಲ್ಲಿ ಯಾವುದೇ ಮೇಲು ಕೀಳು ಎಂಬ ಭಾವನೆಯಿಲ್ಲ, ಕಷ್ಟಸುಖಗಳ ಬಗ್ಗೆ ತಿಳಿಯವು. ಆದರೆ ಪುಟ್ಟರಂಗಿಗೆ ಮಗುವನ್ನು ಹೇಗೆ ಸಮಾಧಾನಗೊಳಿಸಬೇಕು ಎಂಬುದು ತಿಳಿದಿರುತ್ತದೆ. ಒಮ್ಮೆ ಇವರಿಬ್ಬರ ಬಾಂಧವ್ಯ ಕೊನೆಗೊಳ್ಳುವಂತಹ ಸಂದರ್ಭ ಬಂದಿರುತ್ತದೆ. ಪುಟ್ಟರಂಗಿಗೆ ಆಟವಾಡುವ ಬೊಂಬೆಯ ಮೇಲೆ ಮನಸ್ಸಾಗುತ್ತದೆ. ವನಜಾ ಅವಳಿಗೆ ನೀಡುತ್ತಾಳೆ. ಆದರೆ ಇದರಿಂದ ತನ್ನ ಮಗಳಿಗೆ ಕಳ್ಳತನದ ಅಪಾದನೆ ಬರುತ್ತದೆ ಎಂದು ಅದನ್ನು ಹಿಂದಿರುಗಿಸಲು ಹೇಳುತ್ತಾಳೆ. ವನಜಾಳ ಜೊತೆ ಮತ್ತೆ ಆಟಕ್ಕೆ ಹೋಗುಡುವುದಿಲ್ಲ ಎಂಬುದು ಪುಟ್ಟರಂಗಿಯ ಮನಸ್ಸಿನ ಮೇಲೆ ತುಂಬಾ ನೋವುಂಟು ಮಾಡುತ್ತದೆ. ಮಗಳಿಗೆ ಒಂದು ಬೊಂಬೆಯನ್ನು ಕೊಡಿಸಲಾಗದಂತಹ ಆರ್ಥಿಕ ದುಸ್ಥಿತಿಯನ್ನು ನಾವಿಲ್ಲಿ ಕಾಣುತ್ತೇವೆ.

ಆರ್ಥಿಕ ಬಡತನದ ಪರಿಕಲ್ಪನೆಯನ್ನು ಈ ಘಟನೆಯ ಮೂಲಕ ತಿಳಿಸಿದ್ದಾರೆ. ಮಗುವಿನ ದುಃಖವನ್ನು ನಿವಾರಿಸುವ ಶಕ್ತಿಯು ಕೂಡ ಆ ಬಡ ತಾಯಿಗೆ ಇರುವುದಿಲ್ಲ. ಆರ್ಥಿಕವಾಗಿ ಹಿಂದುಳಿದ ಬಡಜನತೆಯ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಕಾಣುತ್ತೇವೆ. ಮಗುವಿನ ಆಸೆಯನ್ನು ಈಡೇರಿಸಲು

ಆಕೆಯ ಬಳಿಯಲ್ಲಿ ಹಣವಿಲ್ಲ. ಒಂದು ಬೊಂಬೆಯನ್ನು ಕೊಡಿಸಲು ಸಾಧ್ಯವಾಗದಂತಹ ಪರಿಸ್ಥಿತಿಯನ್ನು ಕಾಣುತ್ತೇವೆ. ಇಲ್ಲಿ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಈ ಪ್ರಸಂಗದ ಮೂಲಕ ತಿಳಿಸಿದ್ದಾರೆ. ಪುಟ್ಟರಂಗಿಯ ತಾಯಿಯ ವರ್ತನೆ ವಿಚಿತ್ರವೆನಿಸಿದರೂ ಅವರ ಬದುಕಿನ ರೀತಿಗೆ ಅದು ಸಹಜವಾದದ್ದು. ಮತ್ತೊಬ್ಬರ ಹಂಗು ನಮಗೇಕೆ, ದಾರ್ಷ್ಯ ಸ್ವಾಭಿಮಾನಕ್ಕಿಂತ ಇಲ್ಲಿ ಮುಖ್ಯವೆನಿಸುವುದು. ಕಳ್ಳತನದ ಆಪಾದನೆ, ಭಯವುಳ್ಳ ಮತ್ತು ಉಳ್ಳದ ಎರಡು ವರ್ಗಗಳ ನಡುವಿನ ಕಂದರಗಳನ್ನು ಮಕ್ಕಳ ಮುಗ್ಧ ಮನಸ್ಸುಗಳ ಕ್ರಿಯಾಚರಣೆ ಮೂಲಕವೂ ಹೇಗೆ ವ್ಯಕ್ತವಾಗಿದೆ ಎಂಬುದನ್ನು ತಿಳಿಸುತ್ತದೆ.

ಕುಂ. ವೀರಭದ್ರಪ್ಪನವರ ಕಥೆಗಳಲ್ಲಿ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಅವರ ಪ್ರಮುಖ ಕಥೆಗಳಲ್ಲಿ ಒಂದಾದ 'ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ' ಎಂಬ ಕತೆಗಳಲ್ಲಿ ಆಧುನಿಕ ಸಂಘರ್ಷ, ರೂಢಿ ಸಂಪ್ರದಾಯ, ಧಾರ್ಮಿಕ ಚಟುವಟಿಕೆಗಳ ಹೆಸರಿನಲ್ಲಿ ಆರ್ಥಿಕವಾಗಿ ಹೀನ ಸ್ಥಿತಿಯಲ್ಲಿರುವ ಅಸಹಾಯಕರಾದ ಕೆಳವರ್ಗದವರು ಶೋಷಿತರ ದಬ್ಬಾಳಿಕೆಗೆ ಗುರಿಯಾಗುತ್ತಿರುವುದು ಈ ಕತೆಯ ವಸ್ತುವಾಗಿದೆ.

ಹಿಂದಿನ ಕಾಲದ ಹಬ್ಬ ಹರಿದಿನ, ಆಚಾರ ವಿಚಾರ, ದಾನ-ದತ್ತಿಗಳ ವಿವರಣೆಯನ್ನು ತಿಪ್ಪವ್ವನೆಂಬ ಕೆಳವರ್ಗದ ಅಸಹಾಯಕ ವಿಧವೆಯ ಮಾತಿನ ಮೂಲಕ ಕು.ವೀ. ಸಂಪ್ರದಾಯವನ್ನು ಬಿಚ್ಚಿ ತೋರಿಸುತ್ತಲೇ ಅದರ ಹಿಂದಿರುವ ಅನಿಷ್ಟ ಶೋಷಣೆಯನ್ನು ರತ್ನ ಎಂಬು ಹುಡುಗಿಯ ಮಾತಿನ ಮೂಲಕ ವ್ಯಕ್ತಪಡಿಸುತ್ತದೆ.

ಬದುಕು ಸಾಗಿಸುವುದು ಕಷ್ಟವಾಗಿರುವಂತಹ ಸಂದರ್ಭದಲ್ಲಿ ಹಬ್ಬ ಹರಿದಿನಗಳನ್ನು ಸಾಲದ ಮುಖಾಂತರವಾದರೂ ಮಾಡಬೇಕು. ಹಣ ಇರಲಿ ಇಲ್ಲದಿರಲಿ ಹಬ್ಬ ಸಂಪ್ರದಾಯಿಕವಾದ ಕಾರ್ಯಗಳನ್ನು

ಮಾಡಲೇಬೇಕು. ತಿಪ್ಪವ್ವ ಇಲ್ಲಿ ಆರ್ಥಿಕ ಬಡತನವಿದ್ದರೂ ಸಂಪ್ರದಾಯಿಕವಾಗಿ ಮಾಡಬೇಕಾದ ಕಾರ್ಯಗಳನ್ನು ಮಾಡಲೇ ಬೇಕಾಗುತ್ತದೆ. ಇದು ಅಂದಿನ ಸಮಾಜದಲ್ಲಿ ಸಂಪ್ರದಾಯಿಕವಾಗಿ ಶೋಷಿಸುವ ಪುರೋಹಿತ ಸಮಾಜವನ್ನು ಕಾಣಬಹುದು. ಪುರೋಹಿತ ಶಾಹಿ ಪ್ರತಿನಿಧಿಯಾಗಿ ಶುಕ್ರಯ್ಯ "ಚುಟ್ಟದ ಖರ್ಚಿಗೆ ಮೂರು ಪಾವಲಿ ಕೊಡಬೇಕವ್ವಾ ಇಲ್ಲಾಂದ್ರ ಭಿನ್ನ ತೀರ್ಸಿ ಏನ್ ಫಲ"* ಎಂದು ಹೇಳುವ ಮಾತಿನಲ್ಲಿ ಬಿಟ್ಟಿಕೂಳು ತಿಂದಿದ್ದಲ್ಲದೆ ದಕ್ಷಿಣೆ ಹೆಸರಿನಲ್ಲಿ ಹಣ ವಸೂಲಿ ಮಾಡುವ ವ್ಯವಸ್ಥೆಯ ಹೀನ ಸಂಸ್ಕೃತಿಯ ಒಳಗಿನ ಮನೋಧರ್ಮವನ್ನು ಪ್ರತಿನಿಧಿಸುತ್ತದೆ. ಸಾಂಪ್ರದಾಯಿಕವಾಗಿ ನಡೆದು ಬಂದಿರುವ ತ್ರಿವಿಧಿ ದಾಸೋಹ ಕಲ್ಪನೆ ಆಧುನಿಕ ಸಂದರ್ಭದಲ್ಲಿ ಕೆಳವರ್ಗಗಳ ಜಾಗೃತಿಯಿಂದ ಹೇಗೆ ಮಹತ್ವ ಕಳೆದುಕೊಳ್ಳುತ್ತಿದೆ ಎಂಬುದನ್ನು ರತ್ನಾಳ ಮಾತುಗಳ ಮೂಲಕ ಕಾಣಬಹುದು.

ಪ್ರತಿಭಟನೆಯ ಪ್ರತೀಕವಾದ ರತ್ನ 'ಲೋ ಮಕ್ಳಾ ಮುತ್ತಾಳ ಐನೋರ್ನ ಹಿಡುಕೊಳ್ಳಿ ಪುಗಸಟ್ಟೆ ತಿನ್ನೋಕೆ ನಾಚಿಕೆ ಆಗಲಿಲ್ಲೇನೊ' ಎಂದು ಪೊರಕೆಯಿಂದ ಹೊಡೆದು ವಿರೋಧಿಸುವುದು ಹಾಗೂ 'ಮಾಡಿದ ಹೋಳ್ಗೆನೆಲ್ಲಾ ತಿಂತಿಯೇನೊ ಬಾಡ್ಯಾವ್' ಎನ್ನುವುದು ಅವಳ ಹಸಿವಿನ ಹಾಗೂ ಆರ್ಥಿಕ ಬಡತನದ ತೀವ್ರತೆಯನ್ನು ಅಭಿವ್ಯಕ್ತಿಸುತ್ತದೆ. ಪುರೋಹಿತ ವರ್ಗ ತಮ್ಮನ್ನು ಆರ್ಥಿಕವಾಗಿ ಇನ್ನಷ್ಟು ಬಡವರನ್ನಾಗಿಸುವ ಪರಿಕಲ್ಪನೆಯ ಸಂಚನ್ನು ಇಲ್ಲಿ ಕಾಣಬಹುದು. ಯಾವುದೇ ಶ್ರಮವಿಲ್ಲದೆ ಪುರೋಹಿತ ವರ್ಗ ಪಡೆಯುವ ಹಣವನ್ನು ರತ್ನಳ ಮಾತುಗಳಲ್ಲಿ ಕಾಣಬಹುದು. ಆರ್ಥಿಕವಾಗಿ ಶೋಷಿಸುವ ಈ ಜನರ ವಿರುದ್ಧ ಇವಳ ಪ್ರತಿಭಟನೆಯನ್ನು ಕಾಣುತ್ತೇವೆ. ಆರ್ಥಿಕವಾಗಿ ಬಡವರನ್ನಾಗಿಸುವಂತಹ ಜನರನ್ನು ಕಾಣುತ್ತೇವೆ. ತಿಪ್ಪವ್ವ ಆರ್ಥಿಕವಾಗಿ ಮತ್ತಷ್ಟು ಬಡತನವನ್ನು ಅನುಭವಿಸುವ ಸ್ಥಿತಿಯನ್ನು ಈ ಪುರೋಹಿತ ವರ್ಗ ಮಾಡುತ್ತದೆ. ಬಡವರನ್ನು ಆರ್ಥಿಕವಾಗಿ ಮತ್ತಷ್ಟು ಬಡವರನ್ನಾಗಿಸುವ ಪರಿ ಇದೆಂದು ಹೇಳಬಹುದು.

---

* *ಸಂ. ಗಿರಡ್ಡಿ ಗೋವಿಂದರಾಜ-ಟಿಂ.ವಿ. ಅವರ ಕಥಾ ಸಾಹಿತ್ಯ, ಪು.ಸಂ. 24*

'ದೇವರ ಹೆಣ' ಎಂಬ ಕತೆಯಲ್ಲಿ ಆರ್ಥಿಕ ಬಡತನದಿಂದಾಗಿ ಬೇಸತ್ತ ಜನರ ಒಂದು ವಿಶಿಷ್ಟ ಬದುಕಿನ ಚಿತ್ರಣವನ್ನು ಕಾಣಬಹುದಾಗಿದೆ. ಈ ಕತೆಯ ಆರಂಭ ರೊಣ್ಣಿಯ ಹಸಿವಿನ ಚಿತ್ರಣದ ಮೂಲಕ ಆರಂಭವಾಗುತ್ತದೆ. ಆರ್ಥಿಕ ಪರಿಸ್ಥಿತಿಯ ದುಸ್ಥಿತಿ ಹಾಗೂ ಹಸಿವು ಅವನನ್ನು ಯಾವ ಹಂತಕ್ಕೆ ಕರೆದೊಯ್ಯುತ್ತದೆ ಎಂಬುದನ್ನು ಈ ಕತೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ರೊಣ್ಣಿ ಆರ್ಥಿಕವಾಗಿ ಬಡವ, ಒಂದು ಹೊತ್ತಿನ ಕೂಳಿಗಾಗಿ ಪರಿತಪಿಸುತ್ತಿದ್ದನು. ಗೌಡರ ಹಸು ಸತ್ತಿರುವ ವಿಷಯ ಅವನಿಗೆ ಪರಮಾನಂದ ತರುವಂತಹ ವಿಷಯವಾಗಿರುತ್ತದೆ. ಕಾರಣ ಅದನ್ನು ತಂದು ತಿನ್ನಬಹುದೆಂದು. ಆದರೆ ಮನೆ ಹಸುವನ್ನು ತಿನ್ನಲು ಕೊಡಬಾರದೆಂಬುದು ಗೌಡರ ಹಠ. ಆದರೂ ರೊಣ್ಣಿಯ ಹಸಿವಿನ ಮುಂದೆ ಗೌಡರ ಹಠವು ನಿಷ್ಪ್ರಯೋಜಕವಾಗುತ್ತದೆ. ರೊಣ್ಣಿಯು, ಹೂಳಿಟ್ಟ ಹಸುವನ್ನು ತೆಗೆದು ತಿಂದದ್ದು ಗೌಡರಿಗೆ ತಿಳಿದು ಅವರು ಪೊಲೀಸರಿಗೆ ಬರಹೇಳಿದಾಗ ಅಲ್ಲಿ ರೊಣ್ಣಿಯ ಹಸಿವಿನ ಹಾಹಾಕಾರ ಕಂಡು ಪೊಲೀಸರೇ ಹೊರಟು ಹೋಗುತ್ತಾರೆ.

ಈ ಕಥೆಯ ಕೇಂದ್ರ ಪಾತ್ರ ರೊಣ್ಣಿ ಒಂದು ವಿಶಿಷ್ಟವಾದ ಲಕ್ಷಣವನ್ನು ಹೊಂದಿರುವ ವ್ಯಕ್ತಿಯ ನೆಲೆಗಟ್ಟಿನಲ್ಲಿ ಹಾಗೂ ಅವನ ನಡವಳಿಕೆಯ ಜೊತೆಯಲ್ಲಿ ಶಿಷ್ಟ ಸಮಾಜದ ಸರಿ ತಪ್ಪುಗಳನ್ನು ಬಹಿರಂಗಪಡಿಸುವ ರೀತಿ ಮನಮುಟ್ಟುವಂತಿದೆ. ಸತ್ಯವನ್ನು ಬಿಚ್ಚಿ ತೋರಿಸುವಲ್ಲಿ ಓದುಗರನ್ನು ಆಶ್ಚರ್ಯಪಡಿಸುತ್ತದೆ. ಪುಣ್ಯಕ್ಕೆ ಎತ್ತು ಸತ್ತಿದೆ ಎಂದು ರೋಮಾಂಚನಗೊಂಡ ರೊಣ್ಣಿ, ಎತ್ತಿನ ಮಾಂಸ, ತೊಗಲು ತನಗೆ ಸಿಕ್ಕಿಬಿಟ್ಟಿತೆಂದೇ ನಿರೀಕ್ಷೆಯಿಂದ ಕೇಳಿದಾಗ ಗೌಡರು 'ನಿಂಗೆ ಕೊಡೋಕೆ ಸತ್ತಿರೋದು ಅಗಸ್ರ ಕತ್ತಿ ಅಲ್ಲಲೇ ಮನಿಯ ಎತ್ತು, ಅದ್ನ ನಿನ್ ಕೈಗೊಪ್ಸಿ ನಾನ್ಯಾವ ಕರ್ಮಕ್ಕೋಗ್ಲಿ'ಎಂದುಬಿಡುತ್ತಾರೆ.

ಗೌಡರ ಎತ್ತು ಸಾಯಲೆಂದು ದೇವರಿಗೆ ಪ್ರಾರ್ಥನೆ ಸಲ್ಲಿಸಿ ತನ್ನ ಜಾತಿಗೆ ಸಹಜವಾದ ಅಪೇಕ್ಷೆ ನಿರೀಕ್ಷೆಗಳನ್ನು ಇಟ್ಟುಕೊಂಡು ಬಂದಿದ್ದ ಠೊಣ್ಣೆ ತನ್ನ ಆರ್ಥಿಕ ಸಮಸ್ಯೆಗೆ ಒಂದು ಪರಿಹಾರ ಸಿಕ್ಕಿಯೇ ಬಿಟ್ಟಿತೆಂದು ಬಂದಿದ್ದ ಠೊಣ್ಣೆ "ಕ್ಯೋಳೊ ಅಕ್ಯೆತಿ ಕ್ಯೋಳ್ತೀವಿ, ಅದಕ್ಯಾಕೆ ಗೌಡ ನರ ಅರಕೋ ಬೇಕು" ಎಂದು ಗುನುಗುವಾಗ 'ಸತ್ತಿರೋ ಎತ್ತು ಕೈಡಿಸ್ರಪೋ.... ಆ ಎತ್ತು ತಿನ್ನೋದು ನನ್ ಅಕ್ರೆಪ್ವೋ... ಇವತ್ತು ಅನ್ಯಾಯ ನಂಗಾಯ್ತದೆ ಇದೇ ನಾಳೆ ನಿಮ್ಗೂ ಆಯ್ತದೆ..... ಇಂಗಾದ್ರೆ ಒಕ್ಕಲಿಗರ ವಕ್ಕಲು ಮಸ್ತಿನ್ನ ಬೈಕಾಯ್ತುಡ್ರಿಪೋ' ಎಂದು ನಿವೇದಿಸಿಕೊಳ್ಳುವುದು ಮಾರ್ಮಿಕವಾಗಿದೆ. 'ಬದುಕಿರೋವರ್ಗು ನಿಮ್ದು, ಸತ್ಮ್ಯಾಕೆ ನಮ್ದು'* ಇದು ಮಾನ ಮರುವಾದಿ ಪ್ರಶ್ನೆ ಎಂದೆಲ್ಲಾ ಹಲುಬುವ ಠೊಣ್ಣೆ ವ್ಯವಸ್ಥೆಯ ಮೂಲಭೂತ ಬದಲಾವಣೆಯನ್ನು ಬಯಸುತ್ತಿಲ್ಲ. ತಾನು ಒಂದು ಭಾಗವಾಗಿರುವ ರೂಢಿಗತ ವ್ಯವಸ್ಥೆಯಲ್ಲಿ ತನ್ನ ಹಿತಾಸಕ್ತಿಗಳು ಏರುಪೇರಾಗಿರುವುದನ್ನು ವಿರೋಧಿಸುತ್ತಿದ್ದಾನೆ ಅಷ್ಟೆ. ಏಕೆಂದರೆ ಅದು ಅವನ ಅಸ್ತಿತ್ವದ ಪ್ರಶ್ನೆಯಾಗಿದೆ . ಹೀಗಾಗಿ ಅವನು ನಡುರಾತ್ರಿ ಸ್ಮಶಾನಕ್ಕೆ ಹೋಗಿ ಹೂಳಲಾಗಿದ್ದ ಎತ್ತಿನ ಹೆಣವನ್ನು ಕದ್ದುಕೊಂಡು ಬರುವ ಕ್ರಿಯೆ ಕೂಡ ಒಪ್ಪಿಕೊಂಡು ಬಂದ ವ್ಯವಸ್ಥೆಯೊಂದರ ಧಿಕ್ಕಾರವೇ ಆಗುತ್ತದೆ.

ಗೌಡರು ಪೊಲೀಸರನ್ನು ಕರೆತಂದರು. ಠೊಣ್ಣೆಯು ಆ ಸಂದರ್ಭದಲ್ಲಿ ಪೊಲೀಸರಿಗೆ- ತನ್ನನ್ನು ಜೈಲಿಗೆ ಕರೆದುಕೊಂಡು ಹೋಗಿ ಎಂದು ಹಠ ಹಿಡಿಯುತ್ತಾನೆ. ಇದು ಅವನ ಆರ್ಥಿಕ ಬಡತನದಿಂದಾಗಿ ನೊಂದು ಬೇಸತ್ತ ಜೀವನದ ಒಂದು ಅಸಹಾಯಕ ಸ್ಥಿತಿಯ ಘಟ್ಟವನ್ನು ಅಭಿವ್ಯಕ್ತಿಸುತ್ತದೆ. ಅಲ್ಲಿನ ವ್ಯವಸ್ಥೆಯ ವ್ಯಂಗ್ಯವನ್ನು ತಿಳಿಸುವಂತೆ ಮಾಡುತ್ತದೆ. ಕತೆಯ ಅಂತ್ಯ ತನ್ನ ವ್ಯಂಗ್ಯದಿಂದ ಇಡೀ ವ್ಯವಸ್ಥೆಯನ್ನು ತಮಾಷೆ ಮಾಡುತ್ತ ಹಾಗೆ ಮಾಡುತ್ತಲೆ ನಿರಾಕರಿಸುವ ರೀತಿ ಅದ್ಭುತವಾಗಿದೆ.

*ಸಂ. ಗಿರಡ್ಡಿ ಗೋವಿಂದರಾಜ: ಕುಂ.ವೀ. ಅವರ ಕಥಾ ಸಾಹಿತ್ಯ; ಪು.ಸಂ. 10

"ಬಂಡಾಯದ ವ್ಯಕ್ತ ಆಶಯ ಇಲ್ಲದಿದ್ದರೂ ದೇವರ ಹೆಣ ಒಂದು ಉತ್ತಮ ಕತೆಯಾಗಿದೆ. 'ಎಲುಗನೆಂಬ ..... ಅಥವ ಡೋಮ' ಕತೆಗಳಲ್ಲಿನಷ್ಟು ಅನುಭವ ಸಮೃದ್ಧತೆ ಇಲ್ಲಿಲ್ಲ. ಆದರೆ ಕತೆ ಅಧಿಕೃತ ವಿವರಗಳಲ್ಲಿ ಕಟ್ಟಿಕೊಂಡು ತಾನೇ ಬೆಳೆಯುತ್ತ ಯಾವ ಹಂತವನ್ನು ತಲುಪಿ ಬಿಡುತ್ತದೆಯೆಂದರೆ, ಪಾತ್ರದೊಂದಿಗೆ ಸಹಾನುಭೂತಿ ಇಟ್ಟುಕೊಂಡೇ ಓದುತ್ತಿದ್ದರೂ ಸನ್ನಿವೇಶದ ವ್ಯಂಗ್ಯಕ್ಕೆ ದಿಗ್ಭ್ರಾಂತರಾಗಿ ತೆಳು ಸಹಾನುಭೂತಿ ಪೊರೆಯಿಂದ ಕಳಚಿಕೊಂಡು ಬಂದು ಇಡೀ ಪ್ರಸಂಗದ ಬಗ್ಗೆ ಹೊಸದಾಗಿ ಚಿಂತಿಸುವಂತಾಗುತ್ತದೆ. ವ್ಯಂಗ್ಯ, ಹಾಸ್ಯ, ತಮಾಷೆ, ವಿನೋದಗಳನ್ನು ಅರಿವಿನ ಸ್ಫೋಟಕ್ಕಾಗಿ ಬಳಸಿಕೊಂಡ ಬಗೆ ಅಪಾರವಾದ ಮೆಚ್ಚಿಗೆ ಮೂಡುತ್ತದೆ.*

ಕೊರಡ್ಕಲ್ ಶ್ರೀನಿವಾಸರಾವ್‌ರವರ ಧನಿಯರ ಸತ್ಯನಾರಾಯಣ ಎಂಬ ಕಥೆಯಲ್ಲಿ ಬಡತನದ ಮನಕರಗುವ ಚಿತ್ರಣವು ಕಂಡುಬರುತ್ತದೆ. ಬೂದ, ತುಕ್ರಿ ಎಂಬ ಎರಡು ಮುಗ್ಧ ಬಡ ಮಕ್ಕಳು ಇಲ್ಲಿ ಕೇಂದ್ರ ಬಿಂದುವಾಗಿದ್ದಾರೆ. ಬೂದ ಮತ್ತು ತುಕ್ರಿ ತನ್ನ ತಾಯಿಯ ಜೊತೆ ಮಾವನ ಮನೆಗೆ ಹಬ್ಬಕ್ಕೆ ಹೋಗಿರುತ್ತಾರೆ. ಅಲ್ಲಿ ಅವರ ಅಜ್ಜಿ ಅವರಿಗೆ ಬಾಳೆಹಣ್ಣನ್ನು ಕೊಡುತ್ತಾರೆ. ಜಾತ್ರೆಯಲ್ಲಿ ಆ ಮಕ್ಕಳು ಬಾಳೆ ಗೊನೆಯನ್ನು ನೋಡಿದರೆ ಹೊರತು ಅದನ್ನು ತಿಂದಿರಲಿಲ್ಲ. ಜಾತ್ರೆಗೆ ಹೋದಲ್ಲಿ ಒಂದೆರಡು ಮುಂಡಕ್ಕಿಯುಂಡೆ, ಚಕ್ಕುಲಿಗಳಿಗಿಂತ ಹೆಚ್ಚಿನದೇನನ್ನು ಕೊಂಡುಕೊಳ್ಳುವಷ್ಟು ಕಡುಬಡತನ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಕಾಣಬಹುದು. ಅವರು ಒಂದು ಕತೆಯನ್ನು ಅಜ್ಜಿಯ ಬಳಿ ಕೇಳಿಕೊಳ್ಳುತ್ತಾರೆ. ಬಾಳೆ ಕಂದು ನೆಟ್ಟು ಬೆಳೆದ ಹಂತವನ್ನು ವಿವರಿಸುತ್ತಾರೆ. ಅದರ ಮೇಲೆ ಆಸೆಯನ್ನು ಹೊಂದಿದ ಆ ಮಕ್ಕಳು ಅವರ ಮಾವನನ್ನು ಕೇಳಿದಾಗ ಕೊಡುವುದಾಗಿ ಒಪ್ಪಿಕೊಂಡಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ.

*ಸಂಪಾದಕರು-ಗಿರಡ್ಡಿ ಗೋವಿಂದರಾಜ, ಕುಂ.ವೀ. ಅವರ ಕಥಾ ಸಾಹಿತ್ಯ, ಪು.ಸಂ. 5

ತಮ್ಮ ಗುಡಿಸಲು ಸೇರಿದ ಆ ಮಕ್ಕಳು ಎಲ್ಲರಿಗಿಂತ ಮೊದಲು ಎಚ್ಚೆತ್ತು ತೌಡನನ್ನು ಕಾಡಿ ಬೇಡಿ ಅದನ್ನು ನೆಡಿಸಿದರು. ತೌಡನು ದಿನಗೂಲಿ ಮಾಡಿ ಸಂಸಾರ ನಡೆಸುವ ಕಡುಬಡವ. ಆದರೆ ಇರಲಿಕ್ಕೊಂದು ಮಾಡು ಬೇಕಲ್ಲ. ಅದಕ್ಕಾಗಿ ಗೌಡರ ಜಾಗದಲ್ಲೆ ಆ ಬಾಳೆ ಗೊನೆಯನ್ನು ನೆಡುತ್ತಾನೆ. ಅಂದಿನಿಂದ ಬೂದ-ತುಕ್ರಿಯರು ಹೊತ್ತಾರೆ ಎದ್ದು ಮೊದಲು ನೋಡುತ್ತಿದ್ದುದು ಆ ಕಂದನ್ನು, ಇದು ಅವರು ಆ ಗೊನೆಯ ಮೇಲೆ ಇಟ್ಟಿದ್ದ ಪ್ರೀತಿಯನ್ನು ತಿಳಿಸುತ್ತದೆ. ಹಾಗೂ ಬಾಳೆ ಹಣ್ಣನ್ನು ತಿನ್ನದಂತಹ ಕಡು ಬಡತನದಲ್ಲಿ ಬೆಳೆದ ವಾತಾವರಣವನ್ನು ಅಲ್ಲಿ ಕಾಣಲಾಗುತ್ತದೆ.

ಬಾಳೆ ಗೊನೆಯು ಬಲಿಯಿತು. ಗೇಣಿಯ ಬಾಕಿಯನ್ನು ತೌಡ ನೀಡಿರುವುದಿಲ್ಲ. ಇದರಿಂದ ಗೌಡನು ತೌಡನ ಮೇಲೆ ಸಿಟ್ಟಾದಾಗ ತೌಡನು ತೀರಿಸುವುದಾಗಿ ಹೇಳುತ್ತಾನೆ. ಆರ್ಥಿಕವಾಗಿ ಬಡತನವನ್ನು ಗೌಡರ ಶ್ರೀಮಂತಿಕೆಯ ದರ್ಪದಿಂದಾಗಿ ಶೋಷಣೆಗೆ ಒಳಗಾಗುವ ಬಡಜನರ ಗುಂಪಿಗೆ ತೌಡನ ಕುಟುಂಬವು ಸೇರಿರುತ್ತದೆ. ಗೌಡ ದಾರಿಯಲ್ಲಿ ಆ ಬಾಳೆಗೊನೆಯನ್ನು ನೋಡುತ್ತಾನೆ. ಅದನ್ನು ಸತ್ಯನಾರಾಯಣ ಪೂಜೆಗೆ ತಂದುಕೊಡು ಎಂದಾಗ ತೌಟ ನಿಜ ಸಂಗತಿ ಹೇಳಿದಾಗ ಧನಿಯರು, "ಮಕ್ಕಳಿಗೆ ರಸಬಾಳೆ ಹಣ್ಣೋ, ಮಣ್ಣೋ! ದೇವರ ಬಾಯಿಗೆ ಬೀಳಲಿ! ಮಕ್ಕಳ ಮೈಕೈ ಸುಖ ಕೊಡುತ್ತಾನೆ, ಸತ್ಯನಾರಾಯಣ! ಮಕ್ಕಳಿಗಿಟ್ಟುಕೊಂಡು ದೇವರಿಗೆ ಕೊಡೋದಕ್ಕೆ ಹಿಂದೆ ಮುಂದೆ ನೋಡುವೆಯಾ? ಹೀಗೆಲ್ಲ ಮಾಡೋದ್ರಿಂದ್ಲೆ ನಿತ್ಯ ದರಿದ್ರ ತಪ್ಪೋದಿಲ್ಲ ನಿಮಗೆಲ್ಲ"* ಎನ್ನುತ್ತ ತಿರುಗಿ ಕೆಂಪೇರ ತೊಡಗಿದರು.

ಇಲ್ಲಿ ದೇವರು ಮುಖ್ಯ, ಹಸಿದ ಜೀವಗಳಲ್ಲ ಎಂಬುದು ಇವರ ವಾದವಾಗಿದೆ. ಆರ್ಥಿಕವಾಗಿ ಶೋಷಿತವಾಗುವ ಈ ತೌಡನು ಗೇಣಿಯ ವಿಚಾರವಾಗಿಯೂ ಆರ್ಥಿಕವಾಗಿ ಶೋಷಿತರನ್ನಾಗಿ ಮಾಡುವಂತಹ ಜನರನ್ನು ನಾವಿಲ್ಲಿ ಕಾಣುತ್ತೇವೆ.

* *ಸಿ. ಕಾಳೇಗೌಡ ನಾಗವಾರ- ಜೀವನ ಪ್ರೇಮ, ಪು.ಸಂ. 214*

ಮಕ್ಕಳು ಆಸೆಯಿಂದ ಬೆಳೆಸಿದ ಗೊನೆಯನ್ನು ವಿಧಿಯಿಲ್ಲದೆ ತೌಡ ಗೌಡರ ಮನೆಗೆ ಕೊಟ್ಟು ಬರುತ್ತಾನೆ. ಅದನ್ನು ಕೇಳಿದ ಮಕ್ಕಳು ಗೋಳೋ ಎಂದು ಅಳುತ್ತಾರೆ. ಅಳುವ ಕ್ರಿಯೆಯು ಅವರ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಹಾಗೂ ಅಸಹಾಯಕತೆಯನ್ನು ಕಾಣುತ್ತೇವೆ.

ಈ ಎಲ್ಲಾ ಕಥೆಗಳಲ್ಲೂ ಆರ್ಥಿಕವಾಗಿ ಹೇಗೆ ಬಡತನದ ಪರಿಕಲ್ಪನೆ ವ್ಯಕ್ತವಾಗಿದೆ ಎಂಬುದನ್ನು ಈ ಕತೆಗಳಲ್ಲಿ ಕಾಣಲಾಗುತ್ತದೆ. ಆರ್ಥಿಕ ಬಡತನ ಎಂದರೆ ಕೇವಲ ಹಣ ತೊಂದರೆಯನ್ನು ಗುರಿಯಾಗಿಸಿ ಇಲ್ಲಿ ವಿವರಣೆ ಮಾಡಲಾಗಿಲ್ಲ. ಇಲ್ಲಿ ಆರ್ಥಿಕ ದುಸ್ಥಿತಿಯು ಜೀವನದಲ್ಲಿ ಎಂತಹ ಪರಿಣಾಮವನ್ನು ಉಂಟುಮಾಡಿದೆ ಎಂಬುದನ್ನು ತಿಳಿಸುತ್ತಾ ಆರ್ಥಿಕ ಬಡತನದ ಪರಿಕಲ್ಪನೆಯನ್ನು ಈ ಕತೆಗಳಲ್ಲಿ ವ್ಯಕ್ತಪಡಿಸಲಾಗಿದೆ.

# ಅಧ್ಯಾಯ -5

# ಸಾಂಸ್ಕೃತಿಕ ಬಡತನ

ಸಾಂಸ್ಕೃತಿಕ ಬಡತನವೆಂಬುದು ಕನ್ನಡ ಕಥಾ ಸಾಹಿತ್ಯದಲ್ಲಿ ಹಲವಾರು ಕತೆಗಳಲ್ಲಿ ಕಾಣಿಸಿಕೊಂಡಿದೆ. ಸಂಸ್ಕೃತಿ ಎಂದರೆ ಒಂದು ಜನಾಂಗದ ಸಂಸ್ಕೃತಿಯಾಗಬಹುದು ಅಥವಾ ಒಂದು ಕುಟುಂಬದ ಸಂಸ್ಕೃತಿಯಾಗಬಹುದು. ಇವುಗಳಲ್ಲಿ ಉಂಟಾಗುವ ಸಂಘರ್ಷವನ್ನು ನಾವು ಕಾಣಬಹುದಾಗಿದೆ. ಇತ್ತೀಚೆಗೆ ಪಾಶ್ಚಾತ್ಯ ಸಂಸ್ಕೃತಿಯ ಅನುಕರಣೆ ಹೆಚ್ಚಾಗಿದೆ. ಪಾಶ್ಚಾತ್ಯ ಸಂಸ್ಕೃತಿಗಳ ಪ್ರಭಾವದಿಂದಾಗಿ ನಮ್ಮ ಸಂಸ್ಕೃತಿಯಲ್ಲಾಗುವ ಬದಲಾವಣೆ, ಆಂತರಿಕ ಸಂಘರ್ಷದ ಒಳನೋಟವನ್ನು ಇಲ್ಲಿ ಕಾಣಬಹುದು. ಇದರೊಂದಿಗೆ ದೇಶ ದೇಶಗಳ ನಡುವೆ ಸಂಸ್ಕೃತಿಗಳ ವಿನಿಮಯವನ್ನು ಇತ್ತೀಚೆಗೆ ಕಾಣಬಹುದಾಗಿದೆ.

ಸಾಂಸ್ಕೃತಿಕ ಬಡತನದ ಪರಿಕಲ್ಪನೆಯ ಬಗ್ಗೆ ತಿಳಿಸುವ ಕತೆಗಳಲ್ಲಿ ಯಶವಂತರ 'ಕತೆಯಾದಳು ಹುಡುಗಿ' ದೇಸಾಯಿಯವರ 'ಕ್ಷಿತಿಜ', ತೇಜಸ್ವಿಯವರ 'ಅವನತಿ', ದೇವನೂರರ 'ಅಮಾಸ' ಕತೆಗಳಲ್ಲಿ ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ಅನ್ವೇಷಿಸಬಹುದಾಗಿದೆ.

ಕತೆಯಾದಳು ಹುಡುಗಿ, ಕನ್ನಡ ಕಥಾ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ಕತೆಯಾಗಿದೆ. ಈ ಕತೆಯಲ್ಲಿ ವಿಭಿನ್ನ ಸಂಸ್ಕೃತಿಯ ಆಕ್ರಮಣವನ್ನು ಕಾಣಬಹುದು. ಈ ಕತೆಯಲ್ಲಿನ ಮುಖ್ಯವಾದ ಅಂಶಗಳೆಂದರೆ ಕಲೆ, ಪ್ರೀತಿ, ನೋವು, ಕೆಟ್ಟ ಸಮಾಜದ ಚಿತ್ರಣ ಸಾಂಸ್ಕೃತಿಕ ಬಡತನದ ದುರಂತವನ್ನು ಈ ಕತೆಯು ಒಳಗೊಂಡಿದೆ. ಚಿತ್ತಾಲರಲ್ಲಿ ಸೃಜನಶೀಲತೆಗೆ ಇರುವ ಅರ್ಥವೇ ಬೇರೆ. ಈ ಜಗತ್ತಿಗೆ ಸುಂದರವಾದ ಮೋಹಕವಾದ ಮಗುವಾಗಿ ಹುಟ್ಟಿದ ಜಾನಕಿ ತನ್ನ ಎಳೆಯ ಹದಿಮೂರನೆಯ ವಯಸ್ಸಿನಲ್ಲಿ ರಕ್ತದ ಕ್ಯಾನ್ಸರಿನಿಂದ ಸಾಯುತ್ತಾಳೆ. ತಾನು ಸಾಯುವ ಕಾಲದವರೆಗೂ ಆಕೆ ತನ್ನ

ಸುತ್ತಮುತ್ತಲಿನ ಎಲ್ಲರ ಮನವನ್ನು ಸೂರೆಗೊಂಡು ಕೇಳುವುದು 'ತನ್ನ ಬಗ್ಗೆ ಒಂದು ಕತೆ ಬರೆ' ಎಂದು ತಂದೆಯಾದ ನಿರೂಪಕನು ಕತೆಯು ಸಾಮಾಜಿಕ ಮಹತ್ವವನ್ನು ಪಡೆಯಲು ಅವರ ಸ್ನೇಹಿತರು ಹೇಳಿದ ವಿಷಯ ಸೂಚಿಯನ್ನು ಮುಂದಿಟ್ಟುಕೊಂಡು ಕತೆ ಬರೆಯತೊಡಗುತ್ತಾರೆ. ಕತೆಯ ಆರಂಭವು ಜಾನಕಿಯ ಮುಗ್ಧ ಮನಸ್ಸಿನ ನಿರೂಪಣೆಯೊಡನೆ ಆರಂಭಗೊಳ್ಳುತ್ತದೆ. ಪುಟ್ಟ ಜಾನಕಿ ತನ್ನ ಗುಡಿಸಲಿನಲ್ಲಿ ಒಂಟಿಯಾಗಿ ಆಕಾಶದಲ್ಲಿಯ ಚುಕ್ಕೆಗಳಲ್ಲಿ ದೃಷ್ಟಿನೆಟ್ಟು ಸಂಜೆ ದಾರಿ ಕಾಯುತ್ತಿದ್ದ ಆ ಮುಗ್ಧ ಬಾಲೆಯನ್ನು ಎಲ್ಲಿಂದಲೋ ಬಂದ ಸ್ಕೂಟರ್ ಸವಾರರು ಹೊತ್ತುಕೊಂಡು ಹೋಗಿ ಅತ್ಯಾಚಾರ ಮಾಡುತ್ತಾರೆ. ಅವಳನ್ನು ಕೊಂದವರು ಖನಿಗಳ ಒಡೆಯರ ಮಕ್ಕಳು. ಆಕೆಯನ್ನು ಪಶುವಿಗೂ ಕಡೆಯಾಗಿ ಆ ಅಸಹಾಯಕ ದೇಹದ ಮೇಲೆ ಎರಗಿ ಅತ್ಯಾಚಾರ ಮಾಡಿ ನಿಶ್ಚೇಷ್ಟವಾಗಿ ಬಿದ್ದ ದೇಹಕ್ಕೆ ಚಾಕುವಿನಿಂದ ಇರಿದು ಹೋಗುತ್ತಾರೆ. ಒಂದು ಸಮಾಜವೇ ಮಾನವ ಜಾತಿಯ ಸ್ವಭಾಗ ಆದಾಗ ಮಾತ್ರ ಇನ್ನೊಬ್ಬನ ಮಗಳು ಸತ್ತಾಗ ತನ್ನ ಹೊಟ್ಟೆಯ ಮಗಳೇ ಸತ್ತ ವ್ಯಥೆಯ ಕತೆಯಾಗಿ ಮನುಷ್ಯನ ಮನಸ್ಸನ್ನು ಮುಟ್ಟುವುದು. ಇದೊಂದು ಮಾನವ ಸಂಸ್ಕೃತಿಯ ಒಡತನವನ್ನು ಕಾಣಬಹುದಾಗಿದೆ. ಮನುಷ್ಯ ಮನುಷ್ಯನ ನಡುವೆ ಸುಳ್ಳು ಸಂಬಂಧಗಳನ್ನು ಹುಟ್ಟಿಸುವ ಸಮಾಜದಲ್ಲಿಯ ಸಾಹಿತ್ಯಕ್ಕೆ ಕೂಡ ಇಂಥ ಮಾನವೀಯ ಪ್ರಭೆ ಬರಬೇಕು ಎಂಬ ಹಾರೈಕೆ ಸಾಮಾಜಿಕ ಸ್ಥಿತಿ ಈ ಕಥೆಯ ಹಿಂದೆ ಇದೆ. ಕೊನೆಗೆ ಕಥೆಯ ಕಲಾತ್ಮಕತೆಗೆ ಮೂವರು ಗೆಳೆಯರಿಂದ ಕತೆಗಾರನಿಗೆ ಪ್ರಶಂಸೆ ಸಿಗುತ್ತದೆ. ಆ ಪ್ರಶಂಸೆ ಮೊದಲ ಬಾರಿಗೆ ತನ್ನ ಮಗಳ ಸಾವಿಗೆ ಕಾರಣವಾಯಿತು ಅನಿಸುತ್ತದೆ. ಕತೆಗಾರನಿಗೆ ಜಾನಕಿಯ ಮುಗ್ಧ ಬಯಕೆಯ ಮೇಲೆ ನಡೆದ ಅತ್ಯಾಚಾರದಂತೆ ತೋರುವ ಈ ಸಂಗತಿ ಕತೆಗಾರನನ್ನು ಪ್ರೀತಿಯ ಬಾಂಧವ್ಯದ ಅರ್ಥಪೂರ್ಣ ನೆಲೆಯತ್ತ ತಿರುಗಿಸುತ್ತದೆ. ಬದುಕಿನ ಕ್ರೌರ್ಯಕ್ಕೆ ಸಂಕೇತವಾಗುವ ಕತೆಯ ಜಾನಕಿಯ ಸಾವೂ ಸಹ ಕತೆಗಾರನ ಮಗಳು ಜಾನಕಿಯ ಆಶಯದ ಹಾಗೆ ಪ್ರೇಮಗಳ ಪ್ರೀತಿಯ ಜೀವಂತತೆ ಆಕ್ಷೇಪಿಸುವಂತದ್ದು. ಆದ್ದರಿಂದಲೇ ಅನಾಥಾಶ್ರಮದಿಂದ ಹೆಣ್ಣು ಮಗುವನ್ನು ತಂದು ಪ್ರೀತಿಯ ಜಾನಕಿಯ ಹೆಸರಿನಲ್ಲೆ ಬೆಳೆಸಿದ ಘಟನೆಯೂ ಅರ್ಥಪೂರ್ಣವಾಗಿದೆ.

ಈ ಕತೆಯಲ್ಲಿ ಕಲೆ ಮತ್ತು ಜೀವನ ಇವೆರಡೂ ಬೇರೆ ಬೇರೆ ಅಲ್ಲ, ಅನ್ನುವ ಆಶಯವನ್ನು ಒಳಗೊಂಡಿರುವುದುಂಟು. ನಿರಪರಾಧಿ ಜೀವಕ್ಕೆ ಧುತ್ತೆಂದು ಎದುರಾಗುವ ಯಾತನೆ ಸಾವುಗಳಿಗೆ ಇರುವ ಸಾಮಾಜಿಕ ಮಹತ್ವದ ಕಡೆಗೆ ಸಾಗುತ್ತದೆ. ಗಿರಡ್ಡಿ ಅವರು ಹೇಳುವಂತೆ ಲೇಖಕರು ಈ ಕತೆಯಲ್ಲಿ ಕಲಾತ್ಮಕ ಅನುಕಂಪ ಕ್ರೌರ್ಯಕ್ಕೆ ಪ್ರತಿಯಾಗಿ ನಿಜವಾದ ಮಾನವೀಯ ಅನುಕಂಪದ ಅಗತ್ಯವನ್ನು ಎತ್ತಿ ತೋರಿಸುತ್ತಾರೆ. ಸಮಕಾಲೀನ ಸಾಹಿತ್ಯ ಸಿದ್ಧಾಂತಗಳನ್ನು ಕಥೆಯೊಳಗೇ ಎದುರಿಸುತ್ತಾ ಕಲೆ, ಸಿದ್ಧಾಂತಗಳಿಗಿಂತ ಬದುಕು ದೊಡ್ಡದು ಎಂಬ ನಿಲುವನ್ನು ಚಿತ್ತಾಲರು ತಲುಪಿಸಿರುವುದು ಅವರ ಪ್ರಬುದ್ಧ ಬೆಳವಣಿಗೆಗೆ ಸಾಕ್ಷಿಯಾಗಿದೆ. ಇಲ್ಲಿ ಅವರು ಸಾಂಸ್ಕೃತಿಕ ಬಡತನವನ್ನು ಹೇಳಿದ್ದಾರೆ. ಈ ಕತೆಯಲ್ಲಿ ಬರುವ ತಾಂತ್ರಿಕ ಕೌಶಲದ ಬಗ್ಗೆ ಚಿತ್ತಾಲರೇ ಹೇಳುವಂತೆ ಕತೆಯ ಕೇಂದ್ರ ವ್ಯಕ್ತಿ ಯಾವ ವರ್ಗದವನು, ಸಮಾಜದ ಯಾವ ಸ್ತರದವನು, ಹಳ್ಳಿಯವನೋ, ಪಟ್ಟಣದವನೋ ಎಂಬುದು ಮುಖ್ಯವಲ್ಲ, ಅವನ ಮುಖಾಂತರ ನಮ್ಮನ್ನೆಲ್ಲಾ ರೂಪಿಸಿರುವ ಸಮಾಜದ ಸಂಸ್ಕೃತಿಯೇ ಮುಖ್ಯ ಎಂದಿದ್ದಾರೆ. ಮಾನವೀಯ ಸ್ಥಿತಿಯೊಳಗಿನ ಪ್ರಜ್ಞೆಯ ಮುಖಾಂತರ ಎಲ್ಲರ ಅನುಭವಕ್ಕೂ ಬರಲು ಸಾಧ್ಯವಿರುವ ವಾಸ್ತವತೆಯ ಕಡೆಗೆ ಬೆರಳು ಮಾಡಿ ತೋರಿಸುವುದು ತಂತ್ರದ ವಿಶಿಷ್ಟವಾಗಿದೆ. ಈ ಬಗೆಯ ಚರ್ಚೆ ಕತೆಯೊಳಗು ಬರುತ್ತದೆ. ಚಿತ್ತಾಲರ ಹಿಂದಿನ 'ಮುಖಾಮುಖಿ' ಕತೆಯಲ್ಲಿಯೇ ಸೂಕ್ಷ್ಮವಾಗಿ 'ಕತೆಯಾದಳು ಹುಡುಗಿ' ಕಥೆಯ ಒಂದು ಬೀಜರೂಪ ಕಾಣಿಸಿಕೊಂಡಿತ್ತು. ಆದರೆ ಅದು ಒಳಗೊಳ್ಳುವ ಅತಿಯಾದ ಪ್ರತೀಕಗಳ ಬಳಕೆಯಿಂದಾಗಿ ಗಾಢವಾಗಿರಲಿಲ್ಲ. ನಂತರ 'ಕತೆಯಾದಳು ಹುಡುಗಿ' ಕಥೆಯಲ್ಲಿ ಅವರು ಕಲೆ ಮತ್ತು ಜೀವನವನ್ನು ಒಟ್ಟೊಟ್ಟಿಗೆ ಅದರ ಸಂಕೀರ್ಣತೆಯೊಂದಿಗೆ ದಟ್ಟವಾಗಿ ಹಿಡಿಯುವುದರಲ್ಲಿ ಹೊಸತನವನ್ನು ಸಾಧಿಸಿದರು. ಒಟ್ಟಾರೆ ಚಿತ್ತಾಲರು ಒಬ್ಬ ಅಪೂರ್ವ ನವ್ಯ ಕತೆಗಾರರಾಗಿದ್ದು, ನವ್ಯ ಕಥೆಯ ಬೆಳವಣಿಗೆಗೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಹೀಗೆ ಈ ಕತೆಯಲ್ಲಿ ಮಾನವನ ಸಂಸ್ಕೃತಿಯ ಬಡತನದ ಪರಿಕಲ್ಪನೆಯನ್ನು ಕಾಣಲಾಗುತ್ತದೆ. ಮನುಷ್ಯನ ಅಮಾನವೀಯತೆ ಸಂಸ್ಕೃತಿಯ ಬಡತನದ ಪರಿಕಲ್ಪನೆಯನ್ನು ಇಲ್ಲಿ ಕಾಣಬಹುದಾಗಿದೆ.

ಚಿಕ್ಕಮಗುವಿನ ಮೇಲೆ ಅತ್ಯಾಚಾರ ಮಾಡುವ ಯುವಕರ ಈ ವರ್ತನೆಯು ನಮ್ಮ ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ಪ್ರತಿಬಿಂಬಿಸುವಂತಹ ಘಟನೆಯಾಗಿದೆ ಎಂದು ಹೇಳಬಹುದಾಗಿದೆ. ಮನುಷ್ಯ-ಮನುಷ್ಯರ ನಡುವಿನ ಮಾನವೀಯ ಸಂಬಂಧಗಳ ಒರತೆ ಮರೆಯಾಗುವ ದುರಂತದ ಸನ್ನಿವೇಶ ಇದೆನ್ನಬಹುದು.

ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ವಿವರಿಸುವ ಕತೆಗಳಲ್ಲಿ ಶಾಂತಿನಾಥ ದೇಸಾಯಿಯವರ 'ಕ್ಷಿತಿಜ' ಕತೆಯು ಪ್ರಮುಖವಾದುದ್ದು ಎಂದು ಹೇಳಬಹುದಾಗಿದೆ.

ಈ ಕತೆಯು ನವ್ಯದ ಪ್ರತೀಕವಾದ ಕತೆಗಳಲ್ಲಿ ಅತ್ಯಂತ ಯಶಸ್ವೀ ಕತೆಯಾಗಿದೆ. ದೇಸಾಯಿ ಅವರ ಕಥೆಗಳ ಶಕ್ತಿಯ ಕೇಂದ್ರವೆಂದರೆ ಸೃಷ್ಟಿಶೀಲವಾದ ವೈಚಾರಿಕತೆಯನ್ನು ಅಭಿವ್ಯಕ್ತಪಡಿಸುವಲ್ಲಿ ಅನುಭವ ನಿಷ್ಠವಾದ ಸತ್ಯಗಳಿಗೆ ಪ್ರವೃತ್ತಿಗಳಿಗೆ ಕಲೆಯಲ್ಲಿ ರೂಪವನ್ನು ನೀಡುವಲ್ಲಿ ಎಂದು ಹೇಳಬಹುದು.

'ಕ್ಷಿತಿಜ' ಕತೆಯು ತನ್ನ ಕಥಾ ಸಂವಿಧಾನ, ವಸ್ತು ವಿಶೇಷ ಹಾಗೂ ಕಲೆಗಾರಿಕೆಯ ಶಕ್ತಿ ಈ ಕಾರಣಗಳಿಂದಾಗಿ ಅದ್ಭುತ ರಚನೆಯಾಗಿದೆ. ಸರಳ ನಿರೂಪಣೆ, ಅನುಭವ ಸಂಕೀರ್ಣತೆ ಇವುಗಳಿಂದ ದೇಸಾಯಿ ಅವರ ಸಂಪೂರ್ಣ ಯಶಸ್ವೀ ಕಥೆ ಇದಾಗಿದೆ.

ಮಂದಾಕಿನಿಯ ವೈರತ್ವದ ಮೂಲಕ ಅನಾವರಣಗೊಳಿಸುವ ಕತೆಗಾರರ ರೀತಿ, ತಂತ್ರ ಅನನ್ಯವಾಗಿದೆ. ಸಂಕೇತಗಳನ್ನು ರಾತ್ರಿಯ ದೃಶ್ಯಗಳನ್ನು ಸಮುದ್ರದ ವರ್ಣನೆಗಳನ್ನು ವ್ಯಕ್ತಿಯ ಯೌವನ, ಸಂಕೋಚಗಳನ್ನು ಕತೆಗಾರರು ಬಹಳ ಸಮರ್ಥವಾಗಿ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ. ಇಂಗ್ಲೆಂಡ್ ಸಂಸ್ಕೃತಿ ಭಾರತ ಸಂಸ್ಕೃತಿಗಳ ಹೋಲಿಕೆಯನ್ನು ಮಾಡಿ ನೋಡಬಹುದಾಗಿದೆ. ಮಂದಾಕಿನಿ ಕೊನೆಯಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಕಡೆಗೆ ವಾಲುವುದು, ನಮ್ಮ ಸಂಸ್ಕೃತಿಯ ಬಡತನದ ಪರಿಕಲ್ಪನೆಯನ್ನು ತೋರಿಸುತ್ತದೆ.

ಭಾರತದಿಂದ ಇಂಗ್ಲೆಂಡಿಗೆ ಸಮುದ್ರದ ಮೇಲೆ ಹಡಗಿನಲ್ಲಿ ತೆರಳುವ ಮಂದಾಕಿನಿಯ ಮನಸ್ಸಿನ ತೊಳಲಾಟವನ್ನು ಒಳ ಮತ್ತು ಹೊರ ವಿವರಗಳ ಮುಖಾಂತರ ಮೂರ್ತಗೊಳಿಸುವಲ್ಲಿ ದೇಸಾಯಿ ಅವರ ಸಂಯಮ ಎದ್ದುಕಾಣುತ್ತದೆ. ಹೊಸ ಜಗತ್ತಿಗೆ ಪ್ರವೇಶ ಮಾಡುತ್ತಿರುವ ಆಕೆ ಹಿಂದೂ ಸಂಸ್ಕೃತಿಯ ಜಗತ್ತಿನಲ್ಲಿ ಬೆಳೆದು ಬಂದಂತಹ ಮಹಿಳೆ. ತನ್ನ ಸಂಸ್ಕಾರ ಜನ್ಯವಾದ ಸಂಕೋಚಗಳಿಂದ ತನ್ನ ಸುತ್ತಲಿನ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲು ಆಕೆ ದೈಹಿಕವಾಗಿ ಮಾನಸಿಕವಾಗಿ ದೊಡ್ಡ ಹೋರಾಟವನ್ನೆ ಮಾಡುತ್ತಾಳೆ. ತನ್ನ ಸುತ್ತಮುತ್ತಲಿನ ಸಂಸ್ಕೃತಿಯಲ್ಲಿನ ಪರಿಸರ, ಒಡ್ಡುತ್ತಿರುವ ಆಸೆಗಳ ವರ್ಣನೆಯಿಂದ ಎರವಾಗುತ್ತಾಳೆ. ಆ ಸಂಸ್ಕೃತಿಯಲ್ಲಿ ತುಂಬಿ ತುಳುಕುವಂತಹ ಉತ್ಸಾಹ, "ಕಣ್ಣುಕುಕ್ಕಿಸುವ ಉಲ್ಲಾಸ, ಉನ್ಮಾದ ಎಲ್ಲೆಲ್ಲೂ ನಗೆ, ಕಲಕಲ ಹುಚ್ಚು ಹೊಳೆ, ಹೊಳೆಯುವ ಕೆಂಪು, ಬಿಳಿ, ಹಳದಿ ಗ್ಲಾಸುಗಳು, ನಡು ಹಿಡಿದು ಗಲಿ ಗಲಿ ಅಲುಗಾಡಿಸುವ ಬ್ಯಾಂಡ್ ಸಂಗೀತ, ಗಂಡು ಹೆಣ್ಣು, ಸೂಟು-ಫ್ರಾಕು, ಸೂಟು-ಸ್ಕರ್ಟು, ಸೂಟು-ಸೀರೆ, ಇಂದ್ರಧನುಷ್ಯದ ಎಲ್ಲ ಬಣ್ಣಗಳೂ ಕುಣಿಕುಣಿದು ಬೆರೆಯುತ್ತಿವೆ. ಕೆಲವು ಯಕ್ಷ-ಯಕ್ಷಣಿಯರು ಕೊರಳಲ್ಲಿ ಕೊರಳಿಟ್ಟು ಗಲ್ಲಗಲ್ಲ ಹಚ್ಚಿ ಮೈಗೆ ಮೈ ಅಂಟಿಸಿ ಕಾಲು ಮಾತ್ರ ಅಲೆದಾಡಿಸುತ್ತಿದ್ದ ಸ್ವಲ್ಪ ಹೊತ್ತಿನ ಮೇಲೆ ಡೆಕ್ಕಿನ ತುಂಬೆಲ್ಲ ಅಲೆದಾಡುವ ಕಾಲುಗಳು ಅಡ್ಡತಿಡ್ಡ ಒಂದರ ಮೇಲೊಂದು ಬೀಳುವ ಕಾಲುಗಳು, ಹಾಯ್ ಓಹ್...ಹಿಹಿಹಿ.....ಹಾ...ಹಾ...ಹಾ..ಹೊ...ಹೊ..ಹೊ... ಬ್ಯಾಂಡಿಗೆ ಅಮಲೇರಿತೆಂದು ಕಾಣಿಸುತ್ತದೆ. ಬ್ಯಾಂಡಿನವರೂ ಕೈ ಮೇಲು ಕಾಲುಗಲನ್ನು ಕುಣಿಸುತ್ತ ಕ್ಷಿತಿಜ ಹರಿಯುವಂತೆ ಊದತೊಡಗಿದರು. ಕುಣಿಯಬಾರದವರು ಕುಣಿಯ ತೊಡಗಿದರು. ಗದ್ದಲದಲ್ಲಿ ಯಾರಿಗೆ ಯಾರು ಕೇಳುವರು. ಯಾರಿಗೆ ಯಾರು ಇಲ್ಲವೆನ್ನುವರು."* ಕೊನೆಗೆ ಆಕೆಗೆ ಹೊಸದಾಗಿ ದಕ್ಕಿ ಬರುವ ಆ ಅನುಭವಗಳು ಕ್ಷಿತಿಜದಂತೆ ಸಾಂಕೇತಿಕವಾಗಿ ದೂರವಾಗುವ ಮುದುಕ ಮೆಕಾರ್ಥಿ ಆಕೆಯನ್ನು ಹುರಿದುಂಬಿಸುತ್ತಾನೆ. ಉಸಿರುಗಟ್ಟಿಸುವ ಭಾರತೀಯ ಪರಿಸರ, ಇಂಗ್ಲೆಂಡಿನ ಮುಕ್ತ ಪರಿಸರಗಳ ಸಂಘರ್ಷದಲ್ಲಿ ತೊಳಲಾಡುತ್ತಾಳೆ. ಕೊನೆಗೆ ಆಕೆ ಇಂಗ್ಲೆಂಡಿನ ಹೊಸ ಜಗತ್ತನ್ನು ಸ್ವಾಗತಿಸಲು ಸಿದ್ಧಳಾಗುತ್ತಾಳೆ. ಮಂಜು ತಿಳಿಯಾದ ಇಂಗ್ಲೆಂಡಿನ ಕ್ಷಿತಿಜ ಮತ್ತೆ ಆಕೆಯಲ್ಲಿ ಹೊಸ ಆಸೆಯನ್ನು ಮೂಡಿಸುತ್ತದೆ. ಎರಡು ಭಿನ್ನ ಸಂಸ್ಕೃತಿಗಳ ಅನುಭವದ

---

*. *ಜಿ.ಎಸ್. ಆಮೂರರ ಸ್ವಾತಂತ್ರ್ಯೋತ್ತರ ಕನ್ನಡ ಕಥಾಲೋಕ ; ಪು.ಸಂ. 115*

ಸಂಘರ್ಷವನ್ನು ಆಕೆ ಅನುಭವಿಸುತ್ತಾಳೆ. ಈ ಕತೆಯನ್ನು ಕುರಿತು ಜಿ.ಎಚ್. ನಾಯಕರು ಹೇಳುವಂತೆ "ಒಂದು ಸಂಸ್ಕೃತಿಯ ಸಂಕೋಚಗಳು ಸೆಟೆದುಕೊಳ್ಳುವ ಮತ್ತು ಕಳಚಿಕೊಳ್ಳುವ ಬಗೆಯನ್ನು ಒಂದು ವಿಶಿಷ್ಟ ವ್ಯಕ್ತಿ ಮತ್ತು ಆವರಣದ ಸಂದರ್ಭದಲ್ಲಿ ಆತುರವಿಲ್ಲದೆ ಈ ಕತೆಯಲ್ಲಿ ಶೋಧಿಸಲಾಗಿದೆ."*

ಅನ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ನಮ್ಮ ಸಂಸ್ಕೃತಿಯನ್ನು ಸತ್ವಹೀನವಾಗಿ ಕಡೆಗಣಿಸಬೇಕಾಗುವ ಸಂಘರ್ಷವನ್ನು ಎದುರಿಸುತ್ತಾಳೆ. ಹೊಸ ಜಗತ್ತಿನ 'ಕ್ಷಿತಿಜ' ಇವಳಿಗೆ ಹೊಸ ಆಸೆಗಳನ್ನು ಮೂಡಿಸುತ್ತದೆ.

ದೇಸಾಯಿ ಅವರು ಈ 'ಕ್ಷಿತಿಜ' ಕಥೆಯಲ್ಲಿ ನಾಯಕಿಗೆ ತಾನಾಗಿಯೇ ಒದಗಿ ಬಂದ ಅನುಭವವನ್ನು ಸ್ವೀಕರಿಸುವಲ್ಲಿ ಆಕೆ ಎದುರಿಸುವ ಮಾನಸಿಕವಾದ ದೈಹಿಕವಾದ ತುಯ್ದಾಟವನ್ನು ಚಿತ್ರಿಸಿದ್ದಾರೆ. ಆದರೆ ಅನಂತಮೂರ್ತಿ ಅವರು ತಮ್ಮ 'ಕ್ಲಿಪ್ ಜಾಯಿಂಟ್' ಕಥೆಯಲ್ಲಿ ನಾಯಕ ಹೊಸ ಅನುಭವಕ್ಕಾಗಿ ಹುಡುಕಿಕೊಂಡು ಭಾರತದಿಂದ ಇಂಗ್ಲೆಂಡಿಗೆ ಹೋಗಿ ಅಲ್ಲಿ ತೊಳಲಾಡುವ ಚಿತ್ರವನ್ನು ಚಿತ್ರಿಸಿದ್ದಾರೆ. ನವ್ಯ ಕಥೆಗಳ ಎರಡು ಭಿನ್ನವಾದ ಆಶಯಗಳನ್ನು ಈ ಕತೆಗಳಲ್ಲಿ ಕಾಣಬಹುದು. ದೇಸಾಯಿಯವರು ಜೀವನ ಹತ್ತಿರದ ನಿಲುವು ಕಾಮವೇ ಆಗಲೀ ಲೈಂಗಿಕ ಸಂಬಂಧವೇ ಆಗಲೀ ಅವೆಲ್ಲಾ ಅವರಿಗೆ ಅರ್ಥವಂತಿಕೆಯನ್ನು ಕಂಡುಕೊಳ್ಳುವ ಮಾಧ್ಯಮಗಳು. ಗಿರಡ್ಡಿ ಇವರ ಕಥೆಗಳನ್ನು ಕುರಿತು ಹೇಳುವ ವಿಮರ್ಶೆಯ ಮಾತುಗಳು ಅರ್ಥಪೂರ್ಣವಾಗಿದೆ. "ದೇಸಾಯಿ ಅವರ ಕಥೆಗಳ ಕೇಂದ್ರ ಕಾಳಜಿ ಕಾಮ ಆದರೆ, ಕಾಮ ಅದರಲ್ಲಿ ಕೇವಲ ದೈಹಿಕ ಸುಖದ ಉದ್ರೇಕವಲ್ಲ. ನೀತಿ ಬಾಹೀರ ಸಮಾಜದ ರೋಮಾಂಚನಕಾರಿಯಾದುದು ಅಲ್ಲ. ಕಾಮ ಅದರಲ್ಲಿ ಕುಬ್ಜಗೊಳಿಸುವ ವೈಯುಕ್ತಿಕ, ಸಾಮಾಜಿಕ, ಸಾಂಸ್ಕೃತಿಕ, ಮಾನಸಿಕ ಸಂಕೋಚಗಳಿಂದ ಪಡೆಯುವ ಬಿಡುಗಡೆಯ ಸಂಕೇತದ ಬದುಕಿನ ಅರ್ಥಪೂರ್ಣತೆಯ ಅನ್ವೇಷಣೆ" ಈ ಮಾತುಗಳು ದೇಸಾಯಿರವರ ಬರೀ ಕ್ಷಿತಿಜ ಕಥೆಗೆ ಮಾತ್ರ ಅನ್ವಯಿಸುವುದಿಲ್ಲ. ಅವರ ಒಟ್ಟು ಕಥಾ ಸಾಹಿತ್ಯಕ್ಕೆ ಇದು ಅನ್ವಯವಾಗುವಂಥ ವಿಮರ್ಶೆಯಾಗಿದೆ.

---

* *ಶಾಂತಿನಾಥ ದೇಸಾಯಿ, ನವ್ಯಸಾಹಿತ್ಯ ದರ್ಶನ; ಪು.ಸಂ. 47*

ದೇಸಾಯಿ ಅವರು ತಮ್ಮ ಕಥೆಗಳನ್ನು ಕೆಲವು ಇತರ ನವ್ಯ ಕತೆಗಾರರಂತೆ ಕವನಗಳಾಗುವುದಕ್ಕೆ ಬಿಡುವುದಿಲ್ಲ. ಅವುಗಳನ್ನು ಕಥೆಗಳಾಗಿಯೇ ಉಳಿಸಿ ಬೆಳೆಸುತ್ತಾರೆ. ಅವರ ಕಥೆಗಳ ಯಶಸ್ಸು ಇರುವುದೇ ಅವರ ನಿರೂಪಣೆಯ ತಂತ್ರದಲ್ಲಿ ಮತ್ತು ಅನುಭವದ ನೇರ ಅಭಿವ್ಯಕ್ತಿಯಲ್ಲಿ. 'ಕ್ಷಿತಿಜ' ಕಥೆಯು ಅದರ ಭಾಷೆಯ ನಿರೂಪಣೆಯಲ್ಲಿ ಕನ್ನಡ, ಇಂಗ್ಲಿಷ್, ಮರಾಠಿ ಮುಂತಾದ ಎಲ್ಲಾ ಭಾಷೆಗಳ ಪ್ರಭಾವ ಅದರ ಮೇಲೆ ಇದ್ದರೂ ಕೂಡ ಇಂಗ್ಲಿಷ್ ಕನ್ನಡ ಎರಡನ್ನೂ ಬಳಸಿದರೂ ಕಲೆಗಾರಿಕೆಯನ್ನು ಅವರು ಎಂದೂ ದುರ್ಬಲವಾಗಿ ಎಣೆಯುವುದಿಲ್ಲ ಎನ್ನಬಹುದು. ಕ್ಷಿತಿಜ ಕತೆಯ ಯಶಸ್ಸಿಗೆ ಭಾಷೆಯು ಕಾರಣವಾಗಿದೆ ಎನ್ನಬಹುದು.

ಒಟ್ಟಿನಲ್ಲಿ ಈ ಕತೆಯಲ್ಲಿ ಅನ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ನಮ್ಮ ಸಂಸ್ಕೃತಿಯನ್ನು ಹೇಗೆ ಕಡೆಗಣಿಸುತ್ತಿದೆ ಎಂಬುದನ್ನು ನಾವು ಕಾಣಬಹುದಾಗಿದೆ. ಇಲ್ಲಿ ಸಾಂಸ್ಕೃತಿಕ ಬಡತನವನ್ನು ನಾವು ಕಾಣುತ್ತೇವೆ.

ಪೂರ್ಣ ಚಂದ್ರ ತೇಜಸ್ವಿಯವರು ಕನ್ನಡ ಕಥಾ ಸಾಹಿತ್ಯದಲ್ಲಿ ಬಹಳ ಮುಖ್ಯವಾದ ವ್ಯಕ್ತಿ ಎಂದು ಹೇಳಬಹುದಾಗಿದೆ. ಇವರ ಕತೆಗಳಲ್ಲಿ ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ತಿಳಿಸುವ ಕಥೆಗಳಲ್ಲಿ 'ಅವನತಿ' ಕಥೆ ಬಹಳ ಮುಖ್ಯವಾದ ಕತೆಯಾಗಿದೆ.

'ಅವನತಿ' ಕತೆಯು ಒಂದು ಸಮಾಜದ ವಾಸ್ತವಿಕತೆಯ ವರ್ತಮಾನದ ರೋಗಗ್ರಸ್ತ ಸಂಸ್ಕೃತಿಯನ್ನು ಚಿತ್ರಿಸುತ್ತದೆ. ಗತಿಶೀಲವಾದ ಬದುಕಿನ ಅವಿಭಾಜ್ಯ ಅಂಗವಾದ ನಿರ್ದಿಷ್ಟ ಸಮಾಜವೊಂದರ ಭಿತ್ತಿಯೇ ಈ ಕತೆಯ ಪ್ರಮುಖ ಆಶಯವಾಗಿದೆ. ಈ ಕತೆಯ ಪ್ರಮುಖ ಆಶಯ ಈ ಕಥೆಯ ವೈಶಿಷ್ಟ್ಯ ಮತ್ತು ತುಡಿತ ಸಮಕಾಲೀನ ಸಮಾಜ ಹಾಗೂ ಸಾಹಿತ್ಯದಲ್ಲಿಯೇ ಅನನ್ಯವಾದುದು. ಇಸ್ಲಾಪುರದ ಸುರಾಚಾರಿಯ ದುರಂತ ಮತ್ತು ಇತ್ತಾವರದ ಸುಬ್ಬಯ್ಯನ ಹೆಂಡತಿ ಗೌರಿಯ ಅವನತಿಯು ಆ ಸಮಾಜದ ಸಂಸ್ಕೃತಿಯ ಅವನತಿಯನ್ನೂ, ಸಂಸ್ಕೃತಿಯ ಬಡತನವನ್ನೂ ತೋರಿಸುತ್ತದೆ. 'ಅವನತಿ' ಕತೆಯು ಆರಂಭವಾಗುವುದು

ಇಸ್ಲಾಪುರ ಇತ್ತಾವರ ಜೋಗತೀಪೇಟೆ ಮಾಲೂರು ಎಂಬ ಒಂದೇ ಕೂಗಳತೆಯಲ್ಲಿರುವ ಊರುಗಳು. ಜನಜೀವನದ ಕ್ರಮವನ್ನು ದಾಖಲು ಮಾಡುವುದರ ಮುಖಾಂತರ ಈ ಊರಿನ ಜನಗಳೆಲ್ಲಾ ಒಂದು ಬಗೆಯ ವಿಚಿತ್ರ ಜನ, ಆರಕ್ಕೆ ಏರದೆ, ಮೂರಕ್ಕೆ ಇಳಿಯದೆ, ಲಾಭ-ನಷ್ಟವರಿಯದೆ ಅಸಲಿನಲ್ಲೇ ಓಡಾಡುವ ಜನರ ಸಂಸ್ಕೃತಿಯನ್ನು ತಿಳಿಸುತ್ತದೆ. ಇಸ್ಲಾಪುರದಲ್ಲಿ ಮುಸಲ್ಮಾನರ ಕುಟುಂಬಗಳೂ ಮಸೀದಿಯೂ ಉಂಟು. ಬಡತನ, ಶ್ರೀಮಂತಿಕೆ ಹಿಂದು, ಮುಸ್ಲಿಂ ಗಲಾಟೆ, ಚುನಾವಣೆಯ ಕಾಲದ ಗದ್ದಲಗಳು ಎಲ್ಲವೂ ಇದೆ. ಈ ಊರುಗಳಲ್ಲಿ ಸಾಲ ಕೊಡುವವರು, ತೆಗೆದುಕೊಳ್ಳುವವರು, ವಸೂಲಿ ಮಾಡುವವರು ಇದ್ದರು. ಪ್ರಸಕ್ತ ರಾಜಕಾರಣ ಹಾಗೂ ಸಾಮಾಜಿಕ ಸಮಸ್ಯೆಗಳಿಗೆ ಈ ಹಳ್ಳಿಗಳು ನಿಜಕ್ಕೂ ಸವಾಲಾಗಿದ್ದವು. ಇಂಥವರಲ್ಲಿ ಒಬ್ಬನಾಗಿ ಇಸ್ಲಾಪುರದಲ್ಲಿ ಸೂರಾಚಾರಿ ಇದ್ದ. ಆದರೂ ಆ ಪ್ರದೇಶದಲ್ಲಿದ್ದ ಎರಡು ಮಹತ್ತಾದುದೆನ್ನಬಹುದಾದುರಲ್ಲಿ ಅವನು ಒಬ್ಬನಾಗಿದ್ದ. ಇನ್ನೊಂದು ಎಂದರೆ ಇತ್ತಾವರದ ಸುಬ್ಬಯ್ಯನ ಹೆಂಡತಿ ಗೌರಿ. ಈ ಕಥೆ ವ್ಯಾಪ್ತಿ ಮೂರು ಭಾಗದಲ್ಲಿ ಬೆಳೆದಿದೆ. ಮೊದಲನೆಯ ಭಾಗದಲ್ಲಿ ಸೂರಾಚಾರಿಯ ಬಗೆಗಿನ ವಿವರಗಳು ಇವೆ. ಎರಡನೆಯ ಭಾಗದಲ್ಲಿ ಗೌರಿ ಇದ್ದಾಳೆ. ಆಕೆಯ ಜೊತೆ ಕಥೆಗಾರರು ಸೀತಮ್ಮನನ್ನು ನಿಲ್ಲಿಸಿದ್ದಾರೆ. ಮೂರನೆಯ ಭಾಗದಲ್ಲಿ ಸೂರಾಚಾರಿ ಮತ್ತು ಗೌರಿಯ ಗಂಡ ಸುಬ್ಬಯ್ಯ ಇದ್ದಾರೆ. ಇಲ್ಲಿ ಈರೇಗೌಡ ಬರೀ ಪ್ರೇಕ್ಷಕನಾಗಿದ್ದಾನೆ. ಕಥೆ ಗೌರಿಯ ಸ್ತನಗಳ ಮೇಲ್ಗಡೆ ಇರುವ ನೀಲಿ ಸರವನ್ನು ಸುಟ್ಟು ತೆಗೆಯುವ ಕ್ರಿಯೆಗೆ ಗಟ್ಟಿಯಾಗ ನಿಲ್ಲುತ್ತದೆ.

ಸೂರಾಚಾರ ಹಾಲಿ ಇಸ್ಲಾಪುರದ ವಾಸಿ. ಆತ ಹಳೇಬೀಡಿನ ಹತ್ತಿರದ ಪನ್ನಾಪುರದಿಂದ ಬಂದಿದ್ದ. ಆತ ಬಂದಿದ್ದು ಇಸ್ಲಾಂ ಪುರದ ಹತ್ತಿರ ಕಟ್ಟಲಿದ್ದ ಈಶ್ವರ ದೇವಸ್ಥಾನಕ್ಕೆ ಕಲ್ಲಿನ ಕೆಲಸ, ಚಿತ್ತಾರದ ಕೆಲಸ, ಕುಸುರಿ ಕೆಲಸ ಮಾಡುವ ಸಲುವಾಗಿ. ಆದರೆ ಕಾರಣಾಂತರದಿಂದ ಅದು ರದ್ದಾಗಿ ಹೋಯ್ತು. ಆಮೇಲೆ ಸೂರಾಚಾರಿ ಅಲ್ಲೇ ನಾಲ್ಕಾರು ತುಳಸಿಕಟ್ಟೆ ಇತ್ಯಾದಿಗಳನ್ನು ಮಾಡಿಕೊಟ್ಟು ಹಿಂದಿರುಗುವಾಗ ಆತನ ದೂರದ ಸಂಬಂಧಿ ವಾಸಚಾರಿ ಅವನನ್ನು ಬಿಡಲಿಲ್ಲ. ಆತನಿಗೆ ಹೆಂಡತಿ ಇರಲಿಲ್ಲ, ಇದ್ದ ಒಬ್ಬಳೇ ಮಗಳು ಯಶೋಧ. ಸೂರಾಚಾರಿಗೆ ಆಗಲೇ ಇಳಿ ವಯಸ್ಸು. ವಾಸಾಚಾರಿ ಮುಪ್ಪಿನ ಮುದುಕ.

ಆತ ಯಶೋಧೆಯನ್ನು ಸೂರಾಚಾರಿಗೆ ಮದುವೆ ಮಾಡಿದ್ದ. ತಾನು ಸಾಯುವತನಕ ಇಸ್ಲಾಪುರದಲ್ಲೇ ಸೂರಾಚಾರಿ ಇರಬೇಕೆಂದು ಸತ್ತ ಮೇಲೆ ಬೇಕಾದರೆ ಸೂರಾಚಾರಿ ಎಲ್ಲಾದರೂ ಹೋಗಬಹುದು ಎಂದು ಮಾತನಾಡಿಕೊಂಡರು. ಮುದುಕ ಸತ್ತ ಮೇಲೆ ಸೂರಾಚಾರಿ ಊರು ಬಿಟ್ಟು ಹೋಗಲು ಯತ್ನಿಸಿ ವಿಫಲನಾಗುತ್ತಾನೆ. ತನ್ನ ಮಾವನ ಶ್ರಾದ್ಧದ ಕರ್ಮಗಳನ್ನೆಲ್ಲಾ ಮುಗಿಸಿ ಹೆಂಡತಿಯನ್ನು ಕರೆದುಕೊಂಡು ತನ್ನೂರು ಪನ್ನಾಪುರಕ್ಕೆ ಹೊರಟಾಗ ಯಶೋಧೆಗೆ ದೆವ್ವ ಹಿಡಿಯುತ್ತದೆ. ಆಕೆಗೆ ಅಲ್ಲಿಗೆ ಹೋಗಲು ಇಷ್ಟವಿಲ್ಲ. ಇಲ್ಲಿ ಆತನಿಗೆ ಮಲೆಸೀಮೆಯ ಥಂಡಿ, ಹವೆ ಆಗದು. ಗೂರಲು, ಕೆಮ್ಮು, ಉಬ್ಬಸ ಆಗಾಗ ಬರುತ್ತದೆ. ಆ ಹೆಣ್ಣಿನ ಸಲುವಾಗಿ ಇಸ್ಲಾಪುರದಲ್ಲಿ ಸೂರಾಚಾರಿ ಅನಿವಾರ್ಯವಾಗಿ ಉಳಿಯಬೇಕಾಗುತ್ತದೆ. ಒಬ್ಬ ಮಹಾನ್ ಕಲಾವಿದನ ಕಲೆಯನ್ನು ಇಸ್ಲಾಪುರದ ಪರಿಸರ ನಿರ್ದಯವಾಗಿ ಬಲಿತೆಗೆದುಕೊಳ್ಳುತ್ತದೆ. ಸೂರಾಚಾರಿಯ ಮೂಲ ಕಸುಬು ಕಲ್ಲಿನ ಕೆತ್ತನೆಯ ಕೆಲಸ. ಹೊಯ್ಸಳರ ಕಾಲದಿಂದಲೂ ಶಿಲ್ಪಿಗಳಾಗಿದ್ದ ಮನೆತನ ಅವನದು. ದೇವಸ್ಥಾನದ ಕಂಬ, ಮಾಡು, ತುಳಸೀಕಟ್ಟೆ, ದೇವರ ಸುಂದರ ಮೂರ್ತಿಗಳನ್ನು ಮಾಡುತ್ತಿದ್ದನು. ಅವನು ಸ್ವಲ್ಪವೂ ತನ್ನ ಕಲೆಗಾರಿಕೆಯ ಅಸಮಾನ್ಯ ಬಗ್ಗೆ ಪ್ರಜ್ಞಾವಂತನಾಗಿರಲಿಲ್ಲ. ಆದರೂ ಕಲಾವಂತಿಕೆ ಸೂರಾಚಾರಿಯ ಕೈಗೆ ಸಿದ್ಧಿಸಿತ್ತು. ಸೂರಾಚಾರಿಯ ಕೆಲಸ ಅಚ್ಚುಕಟ್ಟಾಗಬೇಕೆಂಬ ಆಲೋಚನೆಯಿಂದ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದ್ದನು. ಆದರೆ ಅದನ್ನೊಂದು ಕಲೆ ಎಂದು ತಿಳಿಯುವುದೇ ಆಗಲಿ ಅವನಿಂದ ಕನಸಿನಲ್ಲೂ ಸಾಧ್ಯವಿರಲಿಲ್ಲ. ಆದರೂ ಅವನೊಬ್ಬ ಮಹಾನ್ ಕಲಾವಿದನೇ ಆಗಿದ್ದ. ಇಸ್ಲಾಪುರಕ್ಕೆ ಬರುವುದಕ್ಕೆ ಮುಂಚೆ ಸೂರಾಚಾರಿ ಮಹಾನ್ ಕಲಾವಿದ ಆಗಿದ್ದರೂ ಶ್ರೇಷ್ಠ ಕಲಾವಂತಿಕೆ ಅವನ ಕೈಗೆ ಸಿದ್ಧಿಸಿದ್ದರೂ ಅವನು ತನ್ನ ಅಸಮಾನ್ಯ ಕಲೆಗಾರಿಕೆಯ ಬಗ್ಗೆ ಪ್ರಜ್ಞಾವಂತನಾಗಿರಲಿಲ್ಲ. ಅವನು ಒಂದು ವೇಳೆ ಪ್ರಜ್ಞಾವಂತನಾಗಿದ್ದರೂ ಅವನ ಪರಿಸರದಲ್ಲಿ ಅವನ ಕಲೆಗಾರಿಕೆ ಮೆಚ್ಚುವವರು, ಬಯಸುವವರು ಇರಲಿಲ್ಲ. ಆದ್ದರಿಂದ ಅವನ ಅಸಮಾನ್ಯ ಕಲಾಪ್ರತಿಭೆ ನಶಿಸಿ ಹೋಗುವಂತಾಗುತ್ತದೆ. ಹಾಗಾಗಿ ಆತನ ಅಸಮಾನ್ಯ ಕಲೆಗಾರಿಕೆಗೆ ಬೇಡಿಕೆ ಇಲ್ಲದಿದ್ದರಿಂದ ಆತ ಬೇರೆ ದಾರಿ ಕಾಣದೆ ಕೊಕ್ಕರೆ ಮೂಗಿನ ಬಿಡುಗಣ್ಣಿನ ಕಿಸುಬಾಯಿಯ ಮಡಕೆ, ಮಾರಿಗೊಂಬೆಗಳನ್ನು ಮಾಡತೊಡಗಿದ. ಅದಕ್ಕೆ ಕೋರೆ ಹಲ್ಲುಗಳನ್ನು ಸೃಷ್ಟಿಸಿ ಚಕ್ರವೇದಿಕೆಯ ಮೇಲೆ ಎಳೆದೊಯ್ಯತೊಡಗಿದ.

ಅವರಿವರ ಮನೆಯ ನುಣ್ಣಗಾದ ಒರಳು ಕಲ್ಲುಗಳಿಗೆ ಉಳಿ ಹಾಕಿ ಕೊಡತೊಡಗಿದ. ಉಗ್ರದೇವತೆಗಳನ್ನು ಮಾಡಿ ಕೈಗೆ ಕತ್ತಿಯನ್ನು, ತ್ರಿಶೂಲವನ್ನು ಕೊಟ್ಟು ತಯಾರಿ ಮಾಡತೊಡಗಿದ. ಜನ ಅವನು ಮಾಡುವ ಗೊಂಬೆಗಳನ್ನು ನೋಡಿ ಮಾರಿ ಜ್ಞಾಪ್ತಿಗೆ ಬರೋದೇ ಇಲ್ಲ ಎನ್ನ ತೊಡಗಿದರು. ಆ ಗೊಂಬೆಗಳಿಗೆ ಹಾಗೇ ಆಗಬೇಕೆಂದು ಆತ ಅಣಕಿಸತೊಡಗಿದ. ತನ್ನ ಹೆಂಡತಿಯ ಸ್ವಭಾವದ ಬಗ್ಗೆ ತನ್ನ ಗುಪ್ತಪ್ರಜ್ಞೆಯಲ್ಲಿದ್ದ ಕೋಪವನ್ನು ತುಂಬಾ ಕ್ರೂರವಾದ ಕಲೆಗಳನ್ನು ಚಿತ್ರಿಸಿ ಅದರ ಮೂಲಕ ತೀರಿಸಿಕೊಳ್ಳತೊಡಗಿದ. ಮಂತ್ರ, ತಂತ್ರ, ತಾಯಿತೆ ಕೊಡುವುದು, ಮದ್ದು ತೆಗೆಯುವುದು ಮುಂತಾದವನ್ನು ಅಭ್ಯಸಿಸ ತೊಡಗಿದ. ಭತ್ತದ ವ್ಯಾಪಾರ ಕೃಷ್ಣೇಗೌಡರ ಬಾಕಿ ವಸೂಲಿ, ಹೆಣ್ಣಿಗೆ ಗಂಡು ಕೊಡಿಸುವುದು, ಎತ್ತಿನ ದಳ್ಳಾಳಿ ವ್ಯಾಪಾರ ಮುಂತಾದ ನೂರಾರು ಅರ್ಥಹೀನವಾದ ಅಸಂಬದ್ಧ ಕಸುಬುಗಳನ್ನು ಮಾಡಬೇಕಾಗಿ ಬಂತು. ಆತನಿಗೆ ಇದರ ನಡುವೆ ತನ್ನ ಹೆಂಡತಿಗೆ ಹಿಡಿದ ಭೂತ ಬಿಡಿಸಲು ತಾನೂ ಅಜಮೀರಿನ ಫಕೀರಪ್ಪನೂ ಕೈಗೊಂಡ ಭೂತೋಚ್ಚಾಟನೆ ವಿಧಾನಗಳಿಂದ ಆಕೆ ಸವೆದು ಹೋದಳು. ಆಕೆಯ ಕೈಗೆ ಖಡ್ಗವನ್ನೂ, ತ್ರಿಶೂಲವನ್ನು ಕೊಟ್ಟರೆ ಮಾರಿಬೊಂಬೆಯಂತೆಯೇ ಕಾಣುವ ಸ್ಥಿತಿಗೆ ಮುಟ್ಟಿದ್ದಳು. ಈ ಕರ್ಮಜಾಲದಿಂದ ವಿಮುಕ್ತನಾಗುವುದೇ ಏಕಮಾತ್ರ ಮಾರ್ಗವೆಂದು ಸೂರಾಚಾರಿಗೆ ಅನ್ನಿಸಿದರೂ, ಈ ವಯಸ್ಸಿನಲ್ಲಿ ಮತ್ತೆ ಒಬ್ಬನೇ ಜೀವನವನ್ನು ಎದುರಿಸುವಷ್ಟು ಚೈತನ್ಯ ಅವನಿಗೆ ಇರಲಿಲ್ಲ. ಕಥೆಯ ಮೊದಲ ಭಾಗದಲ್ಲಿ ಬರುವ ಈ ವಿವರಗಳ ಜೊತೆಗೆ ಸೂರಾಚಾರಿ ಈರೇಗೌಡನಿಗೆ ಎತ್ತು ಕೊಡಿಸಲು ತನ್ನೂರು ಇಸ್ಲಾಪುರದಿಂದ ಇತ್ತಾವರಕ್ಕೆ ಹೊರಟಿರುತ್ತಾರೆ. ಇತ್ತಾವರದ ಸುಬ್ಬಯ್ಯನ ಹತ್ತಿರ ಒಂದು ಎತ್ತು ಇರುತ್ತದೆ. ಅದು ಮಾರಾಟಕ್ಕಿದೆ ಎಂಬುದನ್ನು ಈರೇಗೌಡನಿಗೆ ತಿಳಿಸಿದ ವ್ಯಕ್ತಿ ಸೂರಾಚಾರಿಯೇ. ಅದನ್ನು ಖರೀದಿಸಲು ಸೂರಾಚಾರಿಯೇ ಮಧ್ಯಸ್ಥಿಕೆಗೆ ಸೂಕ್ತ ವ್ಯಕ್ತಿ ಎಂದು ತಿಳಿದು ಈರೇಗೌಡ ಆತನನ್ನು ಕರೆದುಕೊಂಡು ಹೊರಟಾಗ ಒಂದೇ ಸಮನೆ ಮಳೆ ಬರುತ್ತಿರುತ್ತದೆ. ಸುಬ್ಬಯ್ಯನಿಗೆ ಹುಟ್ಟುವ ಮಕ್ಕಳೆಲ್ಲಾ ಸತ್ತು ಹೋಗುವುದರ ಬಗ್ಗೆ ಸುಬ್ಬಯ್ಯನಿಗೆ ಏನೋ ಒಳದೋಷ ಇರಬೇಕೆಂದು ಈರೇಗೌಡನಿಗೆ ಗುಮಾನಿ. ಈ ವಿಷಯ ಸುಬ್ಬಯ್ಯನ ಕಿವಿಗೂ ಬಿದ್ದು ಈರೇಗೌಡನ ಬಗ್ಗೆ ಸಿಟ್ಟು ಕಾರಿರುತ್ತಾನೆ.

ಎರಡನೆಯ ಅಧ್ಯಾಯದಲ್ಲಿ ಸಂತೆಗೆ ಇತ್ತಾವರದಿಂದ ಸುಬ್ಬಯ್ಯನ ಹೆಂಡತಿ ಗೌರಿ ಹಾಗೂ ಅವಳ ವಾರಿಗೆಯವರು ಐದಾರು ಜನ ಮಳೆಯಲ್ಲಿಯೇ ಗೊರಸು ಹಾಕಿಕೊಂಡು ಹೊರಟಿರುವ ಚಿತ್ರವಿದೆ. ಗೌರಿ ಮಾತ್ರ ಆ ಗುಂಪಿನಲ್ಲಿ ಮೌನವಾಗಿ ನಡೆಯುತ್ತಿರುತ್ತಾಳೆ. ಅದಕ್ಕೆ ಕಾರಣ ಕೆಲವು ದಿನಗಳ ಹಿಂದೆ ತನ್ನ ಮಗು ತೀರಿಕೊಂಡಿದ್ದರ ದುಃಖ, ಅಲ್ಲಿ ಗೌರಿ ಒಂದು ಆಶ್ಚರ್ಯ ಅದ್ಭುತಗಳಾಗಿದ್ದಳು. ಸೌಂದರ್ಯದಲ್ಲಿ ಸಕಲ ಶಿಲ್ಪಶಾಸ್ತ್ರ ಲಕ್ಷಣಗಳ ಅವತಾರದಂತೆ ಕಾಣುತ್ತಿದ್ದಳು. ಮೂಗು, ಕಣ್ಣು, ಹುಬ್ಬು ಕೂದಲು, ತುಟಿ ರೇಖೆಗಳು, ಕತ್ತು, ಸ್ತನಗಳು, ನಡುಕಾಲು ಎಲ್ಲ ಇನ್ನೇನು ಮಾಡಿಯೂ ಅವಳ ಸೌಂದರ್ಯವನ್ನು ಹೆಚ್ಚಿಸದಷ್ಟು ಅದ್ಭುತ ಸಾಮರಸ್ಯದಲ್ಲಿ ಮಿಳಿತವಾಗಿದ್ದವು. ಅದಕ್ಕಿಂತ ಮಿಗಿಲಾಗಿ ಆಕೆಯ ನಡೆ ಭಂಗಿ, ನಿಲ್ಲುವ ಭಂಗಿ ಇವುಗಳ ವಿನ್ಯಾಸವಂತೂ ಸೌಂದರ್ಯವೇ ಛಂದೋಬದ್ಧವಾದಂತೆ ಕಾಣುತ್ತಿತ್ತು. ಕುಳಿತರೆ, ನಕ್ಕರೆ ಒಂದೊಂದು ಸಾರಿಯೂ ಒಂದೊಂದು ರೀತಿ ಕಾಣಿಸುತ್ತಿದ್ದಳು. ಆದರೆ ಯಾರಿಗೆ ಆಗುತ್ತಿತ್ತು ಎನ್ನುವುದು ಮಾತ್ರ ಸಂಶಯಾಸ್ಪದ ಪ್ರಶ್ನೆ. ಈ ಪ್ರಶ್ನೆ ಕಥೆಯಲ್ಲಿ ಪ್ರಶ್ನೆಯಾಗಿಯೇ ಉಳಿದುಕೊಳ್ಳುತ್ತದೆ. ಅವಳ ಸೌಂದರ್ಯದ ಬಗ್ಗೆ ಆ ಪರಿಸರದ ವ್ಯಕ್ತಿಗಳಲ್ಲಿ ಯಾರಿಗೂ ಗಮನವಿಲ್ಲ. ಗೌರಿ ಹೇಗೋ ಚೇತರಿಸಿಕೊಂಡು ಹಾಲು ಹಿಂಡಿದಳು. ಅವಳ ಸೌಂದರ್ಯಕ್ಕೆ ಅವಳ ಕುಚಗಳು ಅದ್ಭುತ ಮೆರುಗನ್ನಿತ್ತಿದ್ದವು. ವಿಶ್ವನಾಥನ ವಿಪರೀತ ನಾಚಿಕೆಯು ಅವಳಲ್ಲಿನ ಸ್ತ್ರೀತ್ವವನ್ನು, ಸೌಂದರ್ಯವನ್ನು ತಟ್ಟನೆ ಜ್ಞಾಪಿಸುತ್ತಿದ್ದವು. ಆದರೆ ತನ್ನ ಸೌಂದರ್ಯದ ಬಗ್ಗೆ ಗೌರಿಗೆ ಅಸ್ಪಷ್ಟ ಜ್ಞಾನ ಇದೆ. ಆದರೆ ಜ್ಞಾನ ಇಲ್ಲದ ಸೂರಾಚಾರಿ, ಜ್ಞಾನವಿರುವ ಗೌರಿ ಇಬ್ಬರೂ ಆ ಸಂಸ್ಕೃತಿಯ ಪರಿಸರದಲ್ಲಿ ಒಂದೇ. ಗೌರಿಗೆ ಮದುವೆಯಾಗಿ 4 ವರ್ಷವಾಗಿ 3 ಮಕ್ಕಳಾಗಿದ್ದರೂ ಅವೆಲ್ಲಾ ಶೈಶವಾಸ್ಥೆಯಲ್ಲಿಯೇ ತೀರಿಕೊಂಡಿದ್ದವು. ಆಕೆಗೆ ತನ್ನ ಮಕ್ಕಳು ಮಳೆಗಾಲದಲ್ಲಿ ಹುಟ್ಟುವುದರಿಂದ ಸಾಯುತ್ತವೆ ಎಂಬ ತೀರ್ಮಾನಕ್ಕೆ ಬಂದಿದ್ದಳು. ಮುಂದಿನ ಸಾರಿ ತಾನು ಬಸುರಾದಾಗ ತನ್ನ ಬಯಲು ಸೀಮೆಗೆ ಹತ್ತಿರವಿರುವ, ಮಳೆ ಕಡಿಮೆ ಇರುವ ತವರು ಮನೆಗೆ ಹೋಗಬೇಕೆಂದು ತೀರ್ಮಾನಕ್ಕೆ ಬಂದಿದ್ದಳು. ಆದರೆ ಸುಬ್ಬಯ್ಯನಿಗೆ ಆಕೆಗೆ ಏನೋ ಒಳದೋಷ ಇರಬೇಕು ಎಂದು ಅನುಮಾನ. ಅದಕ್ಕೆ ಸೂರಾಚಾರಿಯಿಂದ ಔಷಧಿ ಮಾಡಿಸಬೇಕೆಂದು ಯೋಚಿಸುತ್ತಾನೆ.

ಇಲ್ಲಿ ಸಾಂಸ್ಕೃತಿಕ ಬಡತನವನ್ನು ಕಾಣುತ್ತೇವೆ. ಆದರೆ ಗೌರಿ ತನ್ನ ಮೂವರು ಮಕ್ಕಳೆಲ್ಲಾ ಸತ್ತಾಗ ತಾನು ಸ್ಮಶಾನಕ್ಕೆ ಹೋಗಿಲ್ಲದರಿಂದ ಸ್ಮಶಾನದಲ್ಲಿ ಕಂಡ ಮಂಗನ ತಲೆಗಳನ್ನು ತನ್ನ ಮಕ್ಕಳ ತಲೆಗಳೇ ಇರಬೇಕೆಂದು ಭ್ರಮಿಸುತ್ತಾಳೆ. ಆದರೆ ಆ ಭ್ರಮೆಯನ್ನು ಆಕೆಯ ಜೊತೆಯಲ್ಲಿ ನಡೆಯುತ್ತಿದ್ದ ಸೀತಮ್ಮ ತನ್ನ ಮಾವ ತಿಂದು ಬಿಸಾಡಿದ ಮಂಗದ ತಲೆಗಳು ಅಂಥ ಹೇಳುತ್ತಾಳೆ. ಆಗ ಗೌರಿಗೆ ತಾನು ಭಿಲ್ಲೋರ ಜಾತಿಯವಳು ಅದನ್ನು ತಿನ್ನುವುದಿಲ್ಲ ಎನ್ನುತ್ತಾಳೆ. ಇಲ್ಲಿ ಕೂಡ ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ಕಾಣುತ್ತೇವೆ. ಮಂಗ ತಿಂದ ಮಾವನ ಬಗ್ಗೆ ಆಕೆಗೆ ಅಸಹ್ಯವೆನಿಸುತ್ತದೆ. ವಿಶ್ವನಾಥ ಓಡಿ ಬಂದು ದಾರಿ ಮಧ್ಯೆ ಗೌರಿಯ ಹತ್ತಿರ ಎದೆ ಹಾಲು ಕರೆಸಿಕೊಂಡು ಹೋಗುತ್ತಾನೆ. ಇಲ್ಲಿ ಭಾಷೆಯಲ್ಲಿ ಏರ್ಪಡುವ ಪಾತ್ರಗಳ ನಾಚಿಕೆಯ ಚಿತ್ರಣ ತೇಜಸ್ವಿಯವರ ಉತ್ತಮ ಗ್ರಹಿಕೆಯಾಗಿದೆ. ಗೌರಿಯ ಮಾವ ಭೈರಪ್ಪನ ಕಣ್ಣಿಗೆ ಏನೋ ಕಸ ಬಿದ್ದದ್ದರಿಂದ ಅದಕ್ಕೆ ಔಷಧಿ ಮಾಡುವುದು ಗೌರಿಯ ಸ್ತನದ ಹಸಿರು ನರ ಸುಡುವುದು ಇವುಗಳೇ ಆ ಮೂರ್ಖರ ನಿರ್ಧಾರಗಳು. ಎತ್ತಿನ ವ್ಯಾಪಾರ ವೈಖರಿ ಭಾಷೆಯಲ್ಲಿ ಅದ್ಭುತ ಎತ್ತಿನ ವ್ಯಾಪಾರ ಮುಗಿದ ಮೇಲೆ ಸುಬ್ಬಯ್ಯ ತನ್ನ ಹುಟ್ಟಿದ ಮಕ್ಕಳೆಲ್ಲ ಸತ್ತುಹೋಗುವುದರ ಬಗ್ಗೆ ಕಥೆಯನ್ನು ಬಿಚ್ಚುತ್ತಾನೆ. ಇದನ್ನು ಆತ ಈರೇಗೌಡನ ಮುಂದೆ ಬೇಕೆಂತಲೇ ಹೇಳುತ್ತಾನೆ. ಯಾಕೆಂದರೆ ಈರೇಗೌಡ ತನಗೆ ಒಳರೋಗ ಇರಬೇಕು ಅಂಥ ಎಲ್ಲೋ ಹೇಳಿದ್ದು, ಸುಬ್ಬಯ್ಯನ ಕಿವಿಗೆ ಬಿದ್ದಿರುತ್ತದೆ. ಆದರೆ ಸೂರಾಚಾರಿ "ಹುಟ್ಟಿದ ಕೂಡಲೇ ಸಾಯ್ತವೊ, ನಾಲ್ಕು ದಿನ ಇದ್ದು ಸಾಯ್ತವೊ" ಎಂದು ಕೇಳುತ್ತಾನೆ. ಆಗ ಸುಬ್ಬಯ್ಯ "ನಾಕುದಿನ ಇರ್ತವೆ, ವೈನಾಗಿರ್ತವೆ. ಹಾಲು ಕುಡಿದು, ಅತ್ತು ನಕ್ಕು ಎಲ್ಲ ಒಂದು ತಿಂಗಳ ಮಟ್ಟಿಗೆ, ಕೊನೆಗೆ ಏನಾರೂ ಒಂದಾಗಿ ಸಾಯ್ತದೆ. ಒಂದಲ್ಲ ಎರಡಲ್ಲ ನನ್ನವು ಮೂರು ಮಕ್ಕಳು ಹೆಣ್ಣಾದ್ದು" ಎನ್ನುತ್ತಾನೆ. ಆಗ ಸೂರಾಚಾರಿ ಇನ್ನೇನಿಲ್ಲಾ 'ಮಲೆಗಿಲೆ ದೋಸಾನ'ಅಂತ ಎಂದು ಗೊಣಗುತ್ತಾನೆ. ಸುಬ್ಬಯ್ಯನಿಗೂ ಅದೇ ಇರಬೇಕು ಅನ್ನಿಸುತ್ತದೆ. ಆಗ ಸೂರಾಚಾರಿ ಇದು ಮಲೆ ದೋಸಾನೆ, ನೀನು ಬೇರೆ ಯೋಚನೆ ಮಾಡೋದೆ ಬ್ಯಾಡ ಮಲೆಲಿ ಮೇಲುಗಡೆ ಒಂದು ನೀಲನರ ಇರ್ತದೆ, ಅದರೊಳಗೆ ಇರ್ತದೆ ನೋಡು ಹುಳ, ಅರಿಶಿನದ ಕೊಂಬಿನ ಕೆಂಡಾ ಮಾಡಿ ಅದನ್ನು ಸುಟ್ಟು ತೆಗೆಯಬೇಕು. ಇಲ್ಲದಿದ್ದರೆ ಒಂದಲ್ಲಾ ಮೂರಲ್ಲ, ನೂರು ಮಕ್ಕಳಾದರೂ ಒಂದು ಉಳಿಯೊಲ್ಲ ಎಂದು

ಹೇಳಿದಾಗ"* ಸುಬ್ಬಯ್ಯ ಅದಕ್ಕೆ ಸಮ್ಮತಿಸುತ್ತಾನೆ. ಆದರೆ ಈರೇಗೌಡನಿಗೆ ಇದು ಇಷ್ಟವಿಲ್ಲ. ಇನ್ನೊಂದು ಮಗು ಆದಾಗಲು ಸತ್ತದೆ, ನೋಡುವ ಎಂಬ ಅವನ ಇಷ್ಟ. ಆದರೆ ಇದಕ್ಕೆ ಸುಬ್ಬಯ್ಯ ತನ್ನ ನಿರ್ಧಾರ ಬದಲಿಸಲಾರ. ಸೂರಾಚಾರಿ 'ನಾನು ಇರೋತನಕ ಮಾಡೋದು ನನ್ನ ಕಾರ್ಯ ಎಂದು ಹೇಳಿ ನಾಳಿದ್ದಿನ ಅಮಾಸೆ ಕಳಕೊಂಡು ಹೆಂಗ್ಸಾ ಕರಕೊಂಡು ಬಾ ಏನಾರು ಒಂದು ಮಾಡಾನ ಎನ್ನುವ ಆತನ ಗಟ್ಟಿ ನಿರ್ಧಾರದಲ್ಲಿ ಕಥೆ ನಿಲ್ಲುತ್ತದೆ. ಸೌಂದರ್ಯಪ್ರಜ್ಞೆಯನ್ನೆ ಕಳೆದುಕೊಂಡ ದುರಂತ ವ್ಯಕ್ತಿಯಾಗಿರುವ ಸೂರಾಚಾರಿ ಸೌಂದರ್ಯದ ಪ್ರತೀಕಳಾದ ಗೌರಿಯ ಸೌಂದರ್ಯವನ್ನು ಹಾಳುಮಾಡುವ ಮಟ್ಟಕ್ಕೆ ಇಳಿಯುವುದು ನಿಜಕ್ಕೂ ಕಥೆಯ ಮಹತ್ವದ ವೈಶಿಷ್ಟ್ಯಗಳಲ್ಲೊಂದು. ಸುಬ್ಬಯ್ಯನ ಮದುವೆ ಗೌರಿಯ ಹೆರಿಗೆ, ಮಕ್ಕಳ ಸಾವು, ಭೈರಪ್ಪ ಮಂಗನ ತಿಂದು ನಿರ್ಮಾಣ ಮಾಡಿರುವ ಸುಡುಗಾಡು ಸೂರಾಚಾರಿಯ ಚೌಕಾಸಿ ಯಶೋಧೆಯ ಭೂತ ಚೇಷ್ಟೆ ಎಲ್ಲವೂ ಒಂದೇ ಬಗೆಯವು. ಗೌರಿಯ ಹೆಣ್ತನ, ತಾಯ್ತನಗಳು ಮಾವ ಭೈರಪ್ಪನ ಕಣ್ಣಿಗೆ ಔಷಧಿಗೆಂದು ಎದೆಹಾಲು ಕೊಡಬಹುದಾದಷ್ಟು ಮಾತ್ರ ಪ್ರಯೋಜನಕ್ಕೆ ಬರುವಂತೆ ಆಕೆಯ ಪಾತ್ರವನ್ನು ಮೂಡಿಸಿರುವ ಅಂಶ ಕಥೆಯಿಂದ ತಿಳಿದುಬರುತ್ತದೆ. ಅಲ್ಲಿನ ಬಡತನದ ಪರಿಕಲ್ಪನೆ ಅವರ ಕಾರ್ಯದಲ್ಲಿ ಕಾಣುತ್ತೇವೆ.

ಗೌರಿಯ ಸೌಂದರ್ಯಕ್ಕೆ ಬರೆ ಇರುವವರೆಗೆ ಹೋಗುವ ಕಣ್ಣುಗಳನ್ನು ಪಡೆಯದ ಸಮಾಜದ ಅವನತಿ ಒಂದು ಕಡೆ, ಬರೆ ಇಡುವ ಕ್ರಿಯೆಯವರೆಗೆ ಪತಿತನಾಗಿರುವ ಸೂರಾಚಾರಿಯ ಬದುಕಿನ ದುರಂತ ಮತ್ತೊಂದು ಕಡೆ. ಇವೆರಡರ ನಡುವೆ ರಾಜಕೀಯವಾಗಿ ಸಾಂಸ್ಕೃತಿಕವಾಗಿ, ಸಮಗ್ರವಾಗಿ ಬಡವಾಗಿ ಹೋಗಿರುವ ಹಳ್ಳಿಯ ಜನಜೀವನ ಕ್ರಮ. ಕಲೆಗಾರಿಕೆ ನಶಿಸಿ ಹೋಗಿ ಅರ್ಥಪೂರ್ಣವಾದುದನ್ನು ಸೃಷ್ಟಿಸಲಾರದೆ ಒಟ್ಟು ಬದುಕಿನ ಕ್ಷಣಗಳನ್ನು ಕೊಲ್ಲುತ್ತಿರುವ ಅಸಹಾಯಕ ಮನುಷ್ಯನಾಗಿರುವ ಸೂರಾಚಾರಿ ಇವುಗಳ ಮೂಲಕ ಈ ಕಥೆ ಕಟ್ಟುವಿಕೆಯು ಸಾಧಕವಾಗಿವೆ. ಬದುಕಿನ ಸಂತೋಷವನ್ನು ಕಳೆದುಕೊಂಡು ಸನ್ನಿವೇಶವು ತೀರಾ ಪರಿಚಿತವಾದ ವ್ಯಕ್ತಿಗಳ ಮೂಲಕ ಇಲ್ಲಿ ಧ್ವನಿತವಾಗಿದೆ. ಲೋಹಿಯಾ ಅವರ ಸಿದ್ಧಾಂತವು ಸೂರಾಚಾರಿ ಮತ್ತು ಗೌರಿ ಪಾತ್ರಗಳ ಸೃಷ್ಟಿಯ ಹಿನ್ನೆಲೆಯಲ್ಲಿದೆ. ತೇಜಸ್ವಿ ಅವರ

* *ಕಾಳೇಗೌಡ ನಾಗವಾರ ; ಜೀವನ ಪ್ರೇಮ ; ಪು.ಸಂ. 47*

ಅತ್ಯಂತ ಪ್ರೀತಿಪಾತ್ರವಾದ ಈ ಪಾತ್ರಗಳು ಸ್ವಭಾವದಲ್ಲಿ ಅತ್ಯಂತ ಮುಗ್ಧರು, ಸರಳರು. ಇವರ ಬಗ್ಗೆ ಕಥೆಗಾರರಿಗೆ ಇರುವ ಪ್ರೀತಿ ಗಾಢವಾದುದು.

ಒಟ್ಟಿನಲ್ಲಿ ಈ ಕತೆಯಲ್ಲಿ ಬಡತನದ ಪರಿಕಲ್ಪನೆಯನ್ನು ಕಾಣುತ್ತೇವೆ. ಗ್ರಾಮ ಸಂಸ್ಕೃತಿಯ ಜನರ ಜೀವನ ಚಿತ್ರಣವನ್ನು ತಿಳಿಸುತ್ತದೆ. ಸಾಂಸ್ಕೃತಿಕ ಬಡತನವನ್ನು ನಾವಿಲ್ಲಿ ಕಾಣುತ್ತೇವೆ.

ದೇವನೂರು ಮಹಾದೇವರು ಕೂಡ ಕತೆಗಾರರಲ್ಲಿ ಅಗ್ರಗಣ್ಯರು, ಇವರ ಹಲವಾರು ಕತೆಗಳಲ್ಲಿ ಇಲ್ಲಿ ಆಯ್ಕೆ ಮಾಡಿಕೊಂಡ ಕತೆ ಅಮಾಸ. ಇಲ್ಲಿ ಗ್ರಾಮೀಣ ಸಂಸ್ಕೃತಿಯ ಚಿತ್ರಣ ಹಾಗೂ ದಲಿತ ಸಂಸ್ಕೃತಿಯ ಬಡತನದ ಪರಿಕಲ್ಪನೆಯನ್ನು ನಾವಿಲ್ಲಿ ಮುಖ್ಯವಾಗಿ ಕಾಣುವಂತಹ ಅಂಶವಾಗಿದೆ.

'ಅಮಾಸ' ಎಂಬ ಕತೆಯು ಅಮಾಸ ಒಂದು ಹೊಸ ಬೆಳಕಿನ ಸಂಕೇತವಾಗಿದೆ. ಈ ಕತೆಯು ದಿಕ್ಕು ದೆಸೆಯಿಲ್ಲದ ಅನಾಥರ ಬದುಕನ್ನು ಚಿತ್ರಿಸುವ ಕೇಂದ್ರ ಉದ್ದೇಶವನ್ನು ಹೊಂದಿದೆ. ಕಥೆಯು ಅಮಾಸನೆಂಬ ಅನಾಥ ಬಾಲಕನನ್ನು ಕೇಂದ್ರವಾಗಿಟ್ಟುಕೊಂಡು ನಿರೂಪಿಸಲ್ಪಡುತ್ತಿದ್ದರೂ ಕುರಿಯಯ್ಯನ ಬದುಕಿನೊಂದಿಗೆ ಅಮಾಸನ ಬದುಕನ್ನು ಸಮೀಕರಿಸಿ ಕುರಿಯಯ್ಯನ ಮುಂದುವರಿದ ಬದುಕೇ ಅಮಾಸ ಎಂಬಂತೆ ಚಿತ್ರಿಸಿರುವುದು ಈ ಅನಾಥರ ಇಂತಹ ಬದುಕು ಹೇಗೆ ಮುಂದುವರಿಯುತ್ತದೆಂಬ ಗಟ್ಟಿಯಾದ ಸಾಂಕೇತಿಕ ಧ್ವನಿಯನ್ನು ಕತೆ ಒಳಗೊಂಡಿರುತ್ತದೆ. ಅಮಾಸನ ವಾಸ್ತವದ ಬದುಕನ್ನು ಚಿತ್ರಿಸುತ್ತಾ ಕತೆ ತೆರೆದುಕೊಳ್ಳುತ್ತದೆ.

ಕುರಿಯಯ್ಯನ ಭೂತಕಾಲದೊಂದಿಗೆ ಅಮಾಸನ ವರ್ತಮಾನವನ್ನು ಸಮೀಕರಿಸಿ ಕುರಿಯಯ್ಯನ ಬದುಕಿನ ಅನ್ಯಾಯ ಚಿತ್ರದ ಪುನರಾವರ್ತನೆ ಅಮಾಸನ ಬದುಕಿನಲ್ಲಿ ಕಾಣಿಸಿಕೊಳ್ಳಲಾರದೆಂಬ ಆಶಯವು ಕತೆಗಾರನಲ್ಲಿ ಕಂಡುಬರುತ್ತದೆ.

ಕಥೆಯ ಎರಡು ಕೇಂದ್ರಬಿಂದುಗಳೆಂದರೆ, ಊರಿನ ಮಾರಿಗುಡಿ ಮತ್ತು ವರ್ಷಕ್ಕೆ ಒಂದಾವರ್ತಿ ನಡೆಯುವ ಮಾರಿಹಬ್ಬ. ಈ ಮಾರಿಹಬ್ಬದ ಸಂದರ್ಭದಲ್ಲಿ ಅಮಾಸ ಹಾಕಿದ ಹುಲಿವೇಷ ಗೌಡರನ್ನು ಕಾಡುತ್ತದೆ. ಅಮಾಸನ ಪಾತ್ರವೇ ಒಂದು ಬೆಳಕಿನ ಸಂಕೇತ. ಅವನ ಕುಣಿತದಿಂದಾಗಿ ನಿದ್ದೆಗೆಡುವ ಗೌಡ, ತನ್ನ ಕಣ್ಣ ಮುಂದೆ ಆಗುತ್ತಿರುವ ಬದಲಾವಣೆಗೆ ದಿಕ್ಕೆಟ್ಟಂತಾಗುತ್ತಾನೆ. 'ಎಲಾ ಅವ್ನ ಅಷ್ಟು ಬೇಗ ಬೆಳೆದು ಬಿಟ್ಟವ್ನ' ಎನ್ನುವ ಮಾತು ಗೌಡರ ಕಣ್ಣಲ್ಲಿ ಬಗೆ ಬಗೆಯ ಹುಲಿವೇಷ ಹಾಕಿ ಕುಣಿವ ಚಿತ್ರ ಮತ್ತೆ ಮತ್ತೆ ಬರುವುದು ಮಹಾದೇವ ಅವರು ತಮ್ಮ ಕತೆಯ ಮೂಲಕ ಸಮಾಜಕ್ಕೆ ತೋರುವ ಪ್ರತಿಭಟನೆ ಅಮಾಸನ ಪಾತ್ರ ಚಿತ್ರಣ ಎಷ್ಟೊಂದು ಕಲಾತ್ಮಕವಾಗಿ ಮೂಡಿ ಬಂದಿದೆಯೆಂದರೆ ಬೀರ ರಂಗಪ್ಪನ ಅಸಹಾಯಕತೆಗೆ ಅಮಾಸ ಉತ್ತರವಾಗುತ್ತಾನೆ. ಅವನ ಹುಲಿವೇಷ ವ್ಯವಸ್ಥೆಯ ಬದಲಾವಣೆಯ ದಿಕ್ಕನ್ನು ಕೇವಲ ಒಂದು ಹೊಸ ಕಿರಣವೆಂದು ಬಿತ್ತುತ್ತದೆ. ಆದ್ದರಿಂದಲೇ ನೇರವಾಗಿ ಹೇಳುವ ವ್ಯವಸ್ಥೆಯ ಬಗೆಗೆ ಭಾಷಣ ಬಿಗಿಸುವ ಎಲ್ಲಾ ಪಾತ್ರಗಳಿಗಿಂತಲೂ ಅಮಾಸನೇ ಸಾಹಿತ್ಯಕವಾಗಿ ಬಂಡಾಯದ ಮೂರ್ತಿಯಾಗಿದ್ದಾನೆ. ಈ ಕತೆಯಲ್ಲಿ ಬರುವ ಸಿದ್ದಪ್ಪನ ಮಾತುಗಳು ಮತ್ತೆ ಮತ್ತೆ 'ಮಾರಿಕೊಂಡವರು' ಕತೆಯ ಬೀರನನ್ನು ನೆನಪಿಸುತ್ತದೆ. ಕುಡಿದ ಅಮಲಿನಲ್ಲಿ ಲೈನ್‌ಮ್ಯಾನ್ ಸಿದ್ದಪ್ಪ ಉರಿಯೋ ಲೈಟು ಕಂಬಕ್ಕೆ ಜಾಡಿಸಿ ಒದ್ದು ಒದ್ದು ಕೋಲಲ್ಲಿ ಜೋರಾಗಿ ಬಡಿದು ತಾನು ವಾಸ್ತವವಾಗಿ ಬಯ್ಯಲಾರದ ಕಂಟ್ರಾಕ್ಟರ್ ರಾಜಕಾರಣಿ ತನ್ನ ಬಾಸ್ ಬಡ್ಡಿ ಮಾದಪ್ಪ ಎಲ್ಲರಿಗೂ ಅನ್ವಯಿಸುವಂತೆ ಬಯ್ಯುತ್ತಾನೆ.

ಪ್ರತಿಭಟನೆ ಮತ್ತು ಯಥಾಸ್ಥಿತಿಯ ಪ್ರಶ್ನೆ ಬಂದಾಗ ಮಾರಿಗುಡಿ ಯಜಮಾನನಾಗಿ ಬದುಕುವ ಕುರಿಯಯ್ಯ ಯಥಾಸ್ಥಿತಿಯಾದರೆ, ಅಮಾಸ ಆ ಸ್ಥಿತಿಯ ಮುಂದುವರಿಕೆಯೆಂದೇ ಗುರುತಿಸಬಹುದು. ಆದರೆ ಈ ಕತೆಯಲ್ಲಿ ಕುರಿಯಯ್ಯನ ಕಾಲ ಸಂದರ್ಭಗಳನ್ನು ಮೀರಿರುವ ಅಮಾಸ ಅಸಹಾಯಕತೆಯನ್ನು ತನ್ನ ಸಹಜ ಚಟುವಟಿಕೆಗಳಿಂದಲೇ ಊರಿನ ಜಮೀನ್ದಾರಿ ವ್ಯವಸ್ಥೆಯನ್ನು ಕಂಗೆಡುವಂತೆ ಮಾಡಿದ್ದಾನೆ. ಒಟ್ಟಾರೆಯಾಗಿ ಅಮಾಸ ವ್ಯವಸ್ಥೆಯ ಮುಂದುವರಿಕೆಗಿಂತಲೂ ಬದಲಾವಣೆಯ ಮೂನ್ಸೂಚನೆಯಾಗಿದ್ದಾನೆ.

ಮಹಾದೇವರ ಕತೆಗಳ ಇತರ ಪಾತ್ರಗಳಂತಲ್ಲದೆ ತನ್ನ ಅಸ್ತಿತ್ವವನ್ನು ಸಮಾಜದಲ್ಲಿ ದಾಖಲು ಮಾಡುತ್ತಾರೆ.

ಅಮಾಸನ ಪಾತ್ರವು ಈ ಕತೆಯಲ್ಲಿ ದಲಿತ ಸಂಸ್ಕೃತಿಯ ಪ್ರತೀಕವಾಗಿ ಮೂಡಿಬಂದಿದೆ. ಹಾಗೂ ಬಲಿಷ್ಠ ಸಂಸ್ಕೃತಿಯ ಪ್ರಭಾವದಿಂದಾಗಿ ದಲಿತ ಬದುಕಿನ ಸಾಂಸ್ಕೃತಿಕ ಪರಿಸರ ಅನುಭವಿಸುವ ಪರಿಕಲ್ಪನೆ ಈ ಕತೆಯಲ್ಲಿ ಬಹಳ ಹೃದಯಂಗಮವಾಗಿ ಮೂಡಿಬಂದಿದೆ. ವ್ಯಕ್ತಿಗಳ ವೈಯಕ್ತಿಕ ಬದುಕಿನೊಂದಿಗೆ ಸಾಂಸ್ಕೃತಿಕ ಬದುಕಿನ ಆವರಣವನ್ನು ಒಳಗೊಳ್ಳುವ ಒಂದು ವಿಶಿಷ್ಟ ಹುಡುಕಾಟವಿದು.

## ಅಧ್ಯಾಯ - 6

ಶೈಕ್ಷಣಿಕ ಬಡತನದ ಬಗ್ಗೆ ಹಲವಾರು ಕತೆಗಳನ್ನು ಕನ್ನಡ ಸಾಹಿತ್ಯದಲ್ಲಿ ಕಾಣಬಹುದು. ಅವುಗಳಲ್ಲಿ ಸಾರಾ ಅಬೂಬಕ್ಕರ್, ವೈದೇಹಿ, ಲಂಕೇಶ್‌ರ ಕತೆಗಳಲ್ಲಿ ನೋಡಬಹುದು. ಬಡತನವೆಂದರೆ ಕೇವಲ ಆರ್ಥಿಕ ಬಡತನ ಎಂದು ಹೇಳುವಂತಿಲ್ಲ. ಏಕೆಂದರೆ ಇನ್ನೂ ಹಲವಾರು ಸಮಸ್ಯೆಗಳನ್ನು ಹೊಂದಿರುವಂತಹ ಸಮಾಜವನ್ನು ನಾವು ನೋಡಬಹುದು. ಅವುಗಳಲ್ಲಿ ಶೈಕ್ಷಣಿಕ ಬಡತನವು ಪ್ರಮುಖವಾದುದ್ದಾಗಿದೆ.

ಸಾರಾ ಅಬೂಬಕ್ಕರ್ ಮುಸ್ಲಿಂ ಪಂಥದ ಪ್ರಮುಖ ಲೇಖಕಿ. ಅಂದಿನ ಸಮಾಜದಲ್ಲಿ ಸ್ತ್ರೀ ಕೇಂದ್ರಿತ ಕತೆಗಳನ್ನು ರಚಿಸಿದವರಲ್ಲಿ ಇವರು ಪ್ರಮುಖರಾಗಿದ್ದಾರೆ. ಅಬುಬಕ್ಕರ್‌ರವರ ಕತೆಗಳಲ್ಲಿ 'ಚಪ್ಪಲಿಗಳು' ಎಂಬ ಕತೆಯು ಶೈಕ್ಷಣಿಕ ಬಡತನದ ಕತೆಗಳಲ್ಲಿ ಪ್ರಮುಖವಾದುದ್ದಾಗಿಗೆ. ಶೈಕ್ಷಣಿಕ ಬಡತನದಿಂದ ಉಂಟಾಗುವ ತೊಂದರೆಗಳನ್ನು ನಾವಿಲ್ಲಿ ಕಾಣಬಹುದಾಗಿದೆ. ಸಂಪ್ರದಾಯಗಳ ನೆಲೆಗಟ್ಟಿನಲ್ಲಿ ಜೀವಿಸುವ ಎಷ್ಟೋ ಹೆಣ್ಣುಮಕ್ಕಳಿಗೆ ಶಿಕ್ಷಣದ ಬಡತನವು ಪ್ರಮುಖವಾಗಿ ಕಾಡುವ ಸಮಸ್ಯೆ. ಶಿಕ್ಷಣದಿಂದ ತಮ್ಮ ಜೀವನದ ಆಯ್ಕೆಯ ದಾರಿಯು ಒಳ್ಳೆಯದಾಗಿರುತ್ತದೆ. ಹಾಗೂ ತಮ್ಮ ಮನಸ್ಸಿನ ಭಾವನೆಗಳನ್ನು ಅಭಿವ್ಯಕ್ತಿಸಲು ಸಾಧ್ಯವಾಗುತ್ತದೆ ಎನ್ನಬಹುದು.

ಸಮೀರಳು ಈ ಕತೆಯ ಕೇಂದ್ರ ಬಿಂದು. ಇವಳು ಫಾತಿಮಾ ಮತ್ತು ಹಸನ್ ಬ್ಯಾರಿಯರ ಮಗಳಾಗಿದ್ದಳು. ಹಸನ್‌ಬ್ಯಾರಿ 'ಮಕ್ಕಳಿರಲವ್ವ ಮನೆತುಂಬ' ಎಂಬ ಧ್ಯೇಯ ಹೊಂದಿ ಜೀವಿಸುತ್ತಿದ್ದವರು. ಸಮೀರಳಿಗೆ ಮದುವೆಯಾಗಿ ಅವಳಿಗೆ ಮಕ್ಕಳಾಗುವ ಸಮಯ ಬಂದರೂ ಮಗಳು ತಾಯಿಯ ಬಾಣಂತನವನ್ನು ಮಾಡಬೇಕಾದ ಸ್ಥಿತಿ ಅವಳ ಮನೆಯಲ್ಲಿತ್ತು. ಸಮೀರ ಬಾಲ್ಯದಿಂದಲೂ ತಾಯಿ ತಂದೆಯರಿಗೆ ವಿಧೇಯಳಾಗಿದ್ದಳು. ಇವಳು ವಯಸ್ಸಿಗೆ ಬರುವ ಮೊದಲೆ ಶಬೀರನೊಡನೆ ಮದುವೆಯಾದಳು.

ಹಸನ್ ಬ್ಯಾರಿ ಶ್ರೀಮಂತರಲ್ಲದಿದ್ದರೂ ಬಡವರಾಗಿರಲಿಲ್ಲ. ಶಬೀರ್ ಸಮೀರಳನ್ನು ಮದುವೆಗೆ ಮುನ್ನ ಸಮೀರ ಶಾಲೆಯಿಂದ ಮನೆಗೆ ಬರುತ್ತಿರುವಾಗ ಗೆಳೆಯರೊಡನೆ ಮಾತಾಡುತ್ತಾ ಬೀದಿಯಲ್ಲಿ ಬರುತ್ತಿರುವುದನ್ನು ನೋಡಿದ ಹಸನ್ ಬ್ಯಾರಿಯ ಗೆಳೆಯರು ಓ ನಿನ್ನ ಮಗಳಿಗೆ ಬುರ್ಕಾ ಹಾಕದೆ ಬೀದಿಯಲ್ಲಿ ಹೀಗೆ ಓಡಾಡಿಸುವುದೆ ಎಂದಾಗ ಶಾಲೆಯನ್ನು ಬಿಡಿಸುವಂತೆ ನಿರ್ಧಾರ ಮಾಡಿ ಅವಳನ್ನು ಶಾಲೆಗೆ ಕಳುಹಿಸುವುದಿಲ್ಲ. ಇಲ್ಲಿ ಸಂಪ್ರದಾಯದ ಕಟ್ಟುಪಾಡುಗಳು, ವೈಚಾರಿಕ ಶ್ರೀಮಂತಿಕೆಯನ್ನು ಬೆಳೆಯಗೊಡದೆ ಬಡತನದ ಆವರಣವನ್ನು ಸೃಷ್ಟಿಸುವ ಕಲ್ಪನೆಯಿದೆ.

ಹೀಗೆ ಮದುವೆಯಾದ ಅವಳು ಗಂಡನೊಡನೆ ಮೊದಲ ದಿನಗಳನ್ನು ಸಂತೋಷವಾಗಿ ಕಳೆದಳು. ಅನಂತರ ಅವನು ದುಬೈಗೆ ಹೋದಾಗ ಅವಳಿಗೆ ಸಂಸಾರಿಕ ಜೀವನದಲ್ಲಿ ನಿರಾಸೆ ಮೂಡಿತು. ಅವನು ಹಿಂದಿರುಗಿದಾಗ ರಜೆ ದಿನಗಳನ್ನು ಸಿನಿಮಾಕ್ಕೆ ಹಾಗೂ ಮಂಗಳೂರಿಗೆ ಹೋಗಿ ಕಳೆದುಕೊಂಡು ಬರುತ್ತಾರೆ. ಇದನ್ನು ಅವರ ತಂದೆಗೆ ಸಹಿಸಲಸಾಧ್ಯವಾಯಿತು. ಹೆಂಗಸರನ್ನು ಚಪ್ಪಲಿಗಳಂತೆ ಇಟ್ಟಿರಬೇಕೆಂದು ಶಬೀರನಿಗೆ ಬುದ್ಧಿವಾದ ಹೇಳುತ್ತಾನೆ.

ಇದನ್ನು ಕೇಳಿದ ಸಮೀರಳಿಗೆ ತುಂಬಾ ದುಃಖವಾಗುತ್ತದೆ. ಆದರೆ ಅದನ್ನು ಪ್ರತಿಭಟಿಸಿ ಕೇಳುವಂತಹ ಧೈರ್ಯವನ್ನು ಅವಳು ಮಾಡುವುದಿಲ್ಲ. ಏಕೆಂದರೆ ಅವಳು ತಂದೆಗೆ ಮೊದಲಿನಿಂದಲೂ ಪ್ರತಿಭಟಿಸಿ ಮಾತಾಡಿರಲಿಲ್ಲ. ಅವಳ ಓದನ್ನು ನಿಲ್ಲಿಸಿದಾಗಲೂ ಅವಳಿಗೆ ಅದನ್ನು ಪ್ರತಿಭಟಿಸುವ ಮನಸ್ಸಾಗುವುದಿಲ್ಲ. ಕಾರಣ ಅವಳಲ್ಲಿ ಯಾವುದೇ ರೀತಿಯ ಧೈರ್ಯ ಅರಿವು ಯಾವುದೂ ಇರಲಿಲ್ಲ. ಅವಳಲ್ಲಿ ಶೈಕ್ಷಣಿಕ ಬಡತನದಿಂದ ಪಡೆದ ಹಿಂಜರಿಕೆ, ಭಯ, ಸಂಕೋಚಗಳೇ ಮೇಲುಗೈಯಾಗುತ್ತವೆ. ಇಲ್ಲಿ ಶೈಕ್ಷಣಿಕ ಕೊರತೆಯಿಂದಾಗಿ ಅವಳ ಅವಳ ಮನಸ್ಸಿನ ವೇದನೆಯನ್ನು ವ್ಯಕ್ತಪಡಿಸಲಿಲ್ಲ. ಅವಳಿಗೆ ಶಿಕ್ಷಣ ಕೊಡಿಸುವುದು ಸಂಪ್ರದಾಯ ವಿರೋಧ ಎಂಬುದಾಗಿ ಹೇಳುವುದು ಮುಸ್ಲಿಂ ಸಂಪ್ರದಾಯದ ಗುರಿಯಾಗಿರುತ್ತದೆ.

ಶಿಕ್ಷಣ ದೊರಕಿಸಿದ್ದರೆ ಆಕೆ ಬಹುಶಃ ಅವಳ ಮನಸ್ಸಿನ ವೇದನೆಯನ್ನು ವ್ಯಕ್ತಪಡಿಸುವಷ್ಟಾದರೂ ಅವಳಲ್ಲಿ ಧೈರ್ಯ ಮೂಡುತ್ತಿತ್ತು ಎನಿಸುತ್ತದೆ. ಹೆಣ್ಣಿಗೆ ಶಿಕ್ಷಣವನ್ನು ವಿರೋಧಿಸುವ ಅಂದಿನ ಸಂಪ್ರದಾಯವನ್ನು ಕಾಣಬಹುದಾಗಿದೆ. ಅವಳು ಮಾನಸಿಕವಾಗಿ ತುಂಬಾ ನೋವನ್ನು ಅನುಭವಿಸುವ ಸ್ಥಿತಿಯನ್ನು ಅಂತ್ಯದಲ್ಲಿ ಕಾಣಬಹುದು. ಚಪ್ಪಲಿಗಳು ಎಂಬ ಕತೆಯಲ್ಲಿ ಸಮೀರಳ ಜೀವನ ದುರಂತವನ್ನು ಕಾಣಬಹುದು. ಶಿಕ್ಷಣದ ಕೊರತೆಯೇ ಈ ಎಲ್ಲಾ ಸಮಸ್ಯೆಗಳಿಗೆ ಪ್ರಮುಖ ಕಾರಣ ಎಂದು ಹೇಳಬಹುದು.

ಸಾರಾ ಅವರ ಕತೆಗಳಲ್ಲಿ ಹೆಣ್ಣು ಈ ರೀತಿಯ ಯಾವುದೇ ಪ್ರತಿಭಟನೆಯನ್ನು ಮಾಡುವುದಿಲ್ಲ. ಜೊತೆಗೆ ಕಿತ್ತು ತಿನ್ನುವ ಬಡತನದಿಂದಾಗಿ ಆಕೆ ವ್ಯವಸ್ಥೆಯ ವಿರುದ್ಧ ಹೋಗುವುದೇ ಇಲ್ಲ. ಅದರ ಜೊತೆಗೆ ತನ್ನನ್ನು ತನ್ನ ಆಸೆ, ಆಕಾಂಕ್ಷೆಯನ್ನೆಲ್ಲ ಕೊಂದು ಕೊಂಡು ಆಕರ್ಷಿಸಿಕೊಂಡು ಬದುಕು ನಡೆಸುತ್ತಾಳೆ. ಅವಳಿಗೆ ಯಾವುದೇ ರೀತಿಯ ಶಿಕ್ಷಣ ಅದರಿಂದಾಚೆಯ ಹೊಸ ಬದುಕು ಲಭಿಸುವುದೇ ಇಲ್ಲ. ಹೆಣ್ಣಿಗೆ ಆಯ್ಕೆಯ ಸ್ವಾತಂತ್ರ್ಯ ಸಂಪೂರ್ಣ ಸೊನ್ನೆಯಾಗುತ್ತದೆ.

'ಚಿಪ್ಪು' ಕತೆಯಲ್ಲಿ ನಾಯಕಿ ಯಶೀ ಅವಿವಾಹಿತೆ, ಅವಳೇ ಹೇಳುವಂತೆ ಅಪ್ಪ ತನಗಾಗಿ ವರ ಹುಡುಕುತ್ತಿದ್ದಾರೆ. ತುಂಬಾ ಒಳ್ಳೆಯ ವರನನ್ನು ಹಿಡಿದು ಅವನಿಗೆ ತನ್ನನ್ನು ಕೊಡಬೇಕೆಂಬ ಆಸೆ ಅಪ್ಪನಿಗೆ. ನೋಡಲು ಚಂದವಿರಬೇಕು, ಏಕೆಂದರೆ ಅವರ ಮಗಳ ಗಂಡನಾಗುವವ ಚಂದವಿರಲೇಬೇಕಂತೆ.

ಇಲ್ಲಿ ಯಶೀಯ ಭಾವ ತುಮುಲತೆ ಕತೆಯನ್ನು ಕಟ್ಟುತ್ತದೆ. ಅವಳಿಗೆ ಉಕ್ಕುವ ಬಯಕೆ ಆದರೆ ಆಕೆ ತನಗೆ ತಿಳಿಯದಂತೆ ತಗ್ಗುತ್ತಾಳೆ. ಸ್ನೇಹಿತೆಯರೊಂದಿಗೆ ಮಾತಾಡಿಕೊಳ್ಳುವಾಗ ಅವಳ ಭಾವ ಪ್ರಪಂಚ ಅಷ್ಟಿಷ್ಟು ಚಾಚಿಕೊಳ್ಳುತ್ತದೆ. ಆದರೆ ಕೌಟುಂಬಿಕ ಪರಿಸರ ಅವಳನ್ನು ಪಳಗಿಸುತ್ತದೆ. ರಂಗಜ್ಜನಿಗಂತು ಅವಳನ್ನು ಕಂಡರೆ ಜೀವ, ಅವಳಷ್ಟು ಪಾಪದ ಹುಡುಗಿ ಸಿಗಲಿಲ್ಲ. ಹಿರಿಯರು ಏನು ಹೇಳಿದರೂ ಹೂಂ ಎನ್ನುವವಳು ಅವಳು. ಇನ್ನಿಬ್ಬರು ಇವಳಂತಲ್ಲ ಎಂದು ಹೊಗಳಿ ಹೊಗಳಿ

ಸಂಪ್ರದಾಯ ಅವಳನ್ನು ತನ್ನಂತೆ ರೂಪಿಸುತ್ತದೆ. ಯಶೀ ಬಾಯ್ತೆರೆಯಲಾರಳು. ಒಮ್ಮೆ ತನ್ನ ಮನಸ್ಸನ್ನು ಅಮ್ಮನೊಡನೆ ಬಿಚ್ಚುವ ಪ್ರಯತ್ನ ಮಾಡಿದರೂ 'ನಾನು ಹೀಗೆ ಹೇಳಿದೆನೆಂದು ಅಪ್ಪನಿಗೆ ಹೇಳಿಬಿಡಬೇಡಿ ಮತ್ತೆ' ಎಂದು ಸೇರಿಸುತ್ತಾಳೆ. ಮತ್ತೆ ತನ್ನ ಮಾತಿಗೆ ತಾನೇ ಕಸಿವಿಸಿಗೊಳ್ಳುತ್ತಾಳೆ. ಇದು ಆಕೆಯ ಮನಸ್ಸಿನಲ್ಲಿ ಮದುವೆಯ ಬಗ್ಗೆ ಇರುವ ದ್ವಂದ್ವ ಮನಸ್ಥಿತಿಯನ್ನು ತಿಳಿಸುತ್ತದೆ. ಇಷ್ಟಕ್ಕೂ ಮದುವೆ ನಿಜಕ್ಕೂ ಬೇಕೆ? ಅದರಲ್ಲೂ ಸದೃಢವಿಲ್ಲ, ರಂಗಜ್ಜಿಯ ಮುದ್ದಿನ ಮೊಮ್ಮಗಳಾಗಿ ಮನೆಯ ಹಿರಿಯ ಮಗಳಾಗಿ ಅದೇ ಆ ಸಂಪ್ರದಾಯದ ಒಳ್ಳೆಯ ಹುಡುಗಿಯಾಗಿ ವ್ಯಕ್ತಿತ್ವದ ವರ್ಚಸ್ಸು ಜಾಸ್ತಿಯಾಗಿ ಹರಿದ ದಿನವೆಲ್ಲ ಮನಸ್ಸು ಈ ವ್ಯಕ್ತಿತ್ವಕ್ಕನುಗುಣವಾಗಿ ದಾಂಪತ್ಯದ ಬಗ್ಗೆ ಕನಸು ಕಂಡಾಗೆಲ್ಲ ಎಂದು ನನ್ನವರನ್ನು ಕಂಡೇನು ? ಅವರು ಯಾರಾಗಿರಬಹುದು? ನಮ್ಮ ಮನೆ, ನಮ್ಮ ಸಂಸಾರ ಹೇಗಿರಬಹುದು? ಎಂಬೆಲ್ಲ ಕುತೂಹಲ ರೋಮಾಂಚನವಾಗುತ್ತದೆ. ಆದರೆ ಅದೇ ಮತ್ತೊಂದು ವ್ಯಕ್ತಿತ್ವ ಗಟ್ಟಿಗೊಂಡಿಲ್ಲವಾದ್ದರಿಂದ ಸದಾ ಪ್ರಶ್ನೆಗಳ ಸುರಿಮಳೆ ಮನದಲ್ಲಿ ಮೂಡಿ ಉತ್ತರ ಪಡೆಯದೆ ಚಡಪಡಿಸುವ ವ್ಯಕ್ತಿತ್ವದ ಲಹರಿ ಮೇಲೆದ್ದಾಗಲೆಲ್ಲ ಮದುವೆ ಎಂದರೆ ನಗು ಬರುತ್ತದೆ. ಇಲ್ಲದಿದ್ದರೆ ಏನಾದೀತು ? ಎಂದು ಸಂಪ್ರದಾಯವನ್ನು ದಾಟಲು ಸಾಧ್ಯವಾಗದೆ ತನ್ನ ಮನದ ಆಸೆಗಳನ್ನು ಹೇಳಲು ಆಗದೆ ಯಶೀ ಒಂದು ರೀತಿಯ ದ್ವಂದ್ವದಲ್ಲಿ ಸಿಲುಕಿ ಮೂಕವೇದನೆ, ಆತಂಕಗಳಿಗೆ ಒಳಗಾಗುತ್ತಾಳೆ. ಇಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ನಾವು ಕಾಣಬಹುದಾಗಿದೆ.

'ಬೀಳು ಬೇರು' ಕತೆಯಲ್ಲಿ ಇಂದಿ ಅವಿವಾಹಿತೆ, ಅನೇಕ ಜನರು ವರಗಳು ಬಂದು ಆಕೆಯನ್ನು ನೋಡಿಕೊಂಡು ಹೋಗುತ್ತಾರೆ. ಆದರೆ ಆಕೆಗೆ ಇನ್ನು ಮದುವೆಯಾಗಿಲ್ಲ. ಇಂದಿಯ ತಂದೆಗೆ ಇಲ್ಲಿ ನಿರೂಪಕ ಪ್ರಜ್ಞೆ ಇದೆ. ಇಂದಿಯ ಪ್ರಜ್ಞೆಯಲ್ಲಿ ಈತನು ತಾನು ಎಮ್ಮೆ ಕೊಳ್ಳಲು ಮಾಡುವ ಪ್ರಯತ್ನಗಳು ಮತ್ತು ಇಂದಿಗೆ ವರ ಹುಡುಕುವ ಪ್ರಯತ್ನಗಳು ಒಟ್ಟೊಟ್ಟಿಗೆ ಕಾಣಿಸಿಕೊಳ್ಳುತ್ತವೆ. ಅಂದರೆ ಇಲ್ಲಿ ಮದುವೆ ಎನ್ನುವುದು ಒಂದು ರೀತಿಯಲ್ಲಿ ವ್ಯಾಪಾರವಿದ್ದಂತೆ. ಹೆಣ್ಣು ಇಲ್ಲಿ ಮೂಕ ಪ್ರಾಣಿಯಂತೆ. ಯಾವುದೇ ರೀತಿಯ ಪ್ರತಿಭಟನೆಯನ್ನು ಮಾಡದೆ ಮಾರಾಟದ ವಸ್ತುವಾಗುತ್ತಾಳೆ. ಇಲ್ಲಿ ಅಪ್ಪ ತುಂಬ

ಚುರುಕಾಗಿದ್ದಾನೆ. ಇವನಿಗೆ ತನ್ನ ಮಗಳ ಮನಸ್ಸು ಸರಿಯಾದ ರೀತಿಯಲ್ಲಿ ಅರ್ಥವಾಗುವುದಿಲ್ಲ. ಆತ ಕತೆಯ ಉದ್ದಕ್ಕೂ ಸಂವೇದನಾಶೀಲನಾಗಿದ್ದರೂ ಮಗಳ ಒಳಮನಸ್ಸು ಅರಿಯಲಾರದ ಆತ ಹೇಳುವಂತೆ ನಿನ್ನ ಅಮ್ಮ ನಾನು ನೋಡಿದ ಇಪ್ಪತ್ತನೆಯ ಹುಡುಗಿ ಗೊತ್ತಿದಿಯೇ ? ಇದು ಆತನಿಗೆ ತೀರ ಸಹಜವಾದ ವಿಷಯ. ಇಂದಿಗೆ ಇದು ಒಂದು ರೀತಿಯಲ್ಲಿ ಮಾನಸಿಕ ಹಿಂಸೆ. ಅವಳು ಒಟ್ಟಿನಲ್ಲಿ ಉಸಿರುಕಟ್ಟುವ ವಾತಾವರಣ ಅವಳ ಅಭಿವ್ಯಕ್ತಿ ಮಾಧ್ಯಮ ಮಾತಲ್ಲ, ಬದಲಾಗಿ ಬರಿ ಕಣ್ಣೀರು. ಆಕೆಯ ಮನದ ಭಾವನೆಗಳು ಆಸೆ, ಆಕಾಂಕ್ಷೆ, ಬೇಕು ಬೇಡಗಳು ಯಾರಿಗೂ ತಿಳಿಯುವುದೇ ಇಲ್ಲ. ಇಲ್ಲಿ ಶೈಕ್ಷಣಿಕ ಬಡತನವನ್ನು ಎಲ್ಲಾ ಹಂತದಲ್ಲೂ ಕಾಣಬಹುದಾಗಿದೆ.

ಸಾರಾ ಅವರ ಕತೆಯಲ್ಲು ಹಿರಿಯರೆ ಹೆಣ್ಣಿನ ಬಾಳ ಸಂಗಾತಿಯನ್ನು ಹುಡುಕುವವರು. ಹೆಣ್ಣಿಗೆ ಶಿಕ್ಷಣ ಸ್ವಾತಂತ್ರ್ಯವು ಇಲ್ಲ. ಗಂಡು ಏನೇ ಆಗಿದ್ದರೂ ಸರಿ ಹೆಣ್ಣನ್ನು ಮದುವೆ ಮಾಡಿಬಿಟ್ಟರೆ ಸಾಕು ಎನ್ನುವ ಮನೋಭಾವದವರು ಇವರ ಎಲ್ಲಾ ಕತೆಗಳಲ್ಲು ಹೆಣ್ಣಿಗೆ ಆಯ್ಕೆಯ ಪ್ರಶ್ನೆಯೇ ಬರುವುದಿಲ್ಲ.

'ಮರಿಯಮ್ಮನ ಅಳಿಯ' ಕತೆಯಲ್ಲಿ ಮರಿಯಮ್ಮನಿಗೆ ಜುಲೇಕ ಎಂಬ ಮಗಳಿರುತ್ತಾಳೆ. ಆಕೆಯ ಮದುವೆಗಾಗಿ ಮರಿಯಮ್ಮ ಕಷ್ಟಪಟ್ಟು ಬೇರೆಯವರ ಮನೆಯಲ್ಲಿ ಕೆಲಸ ಮಾಡಿ ಹಣ ಸಂಪಾದಿಸುತ್ತಾಳೆ. ಮಗಳು ಮದುವೆ ವಯಸ್ಸಿಗೆ ಬಂದಾಗ ಆಕೆಗೆ ಗಂಡು ಹುಡುಕುವ ಸಲುವಾಗಿ ಎಲ್ಲರನ್ನು ವಿಚಾರಿಸುತ್ತಾಳೆ. ಕಾದರ್‌ಹಾಜಿ ಆವಿಯಮ್ಮ ಇವರ ಮನೆಯಲ್ಲಿ ಕೆಲಸ ಮಾಡುವ ಮರಿಯಮ್ಮ ಅವರ ಬಳಿ ಸಾಲ ತೆಗೆದುಕೊಂಡು ದಳ್ಳಾಳಿಯು ತೋರಿಸಿಕೊಟ್ಟ ಮೈದು ಎಂಬ ಹುಡುಗನೊಂದಿಗೆ ವಿವಾಹ ಮಾಡಲು ಒಪ್ಪುತ್ತಾರೆ. ಆತ ತಲಚೇರಿ ಕಲ್ಲಿಕೋಟೆಯಿಂದ ಬಂದ ಅನಾಥ. ತಮ್ಮ ಮಗಳನ್ನು ಒಂದು ಮಾತೂ ಕೇಳದೆ ಆತನಿಗೆ ಮದುವೆ ಮಾಡಿಕೊಡುತ್ತಾರೆ. ಸ್ವಲ್ಪ ದಿನ ಒಳ್ಳೆಯವನಂತೆ ನಟಿಸಿ ಮೈದು ಕೊನೆಗೊಂದು ದಿನ ಮನೆಯಲ್ಲಿದ್ದ ಎಲ್ಲಾ ವಸ್ತುಗಳನ್ನು ಹಣ ಒಡವೆ ಎಲ್ಲವನ್ನು ಎತ್ತುಕೊಂಡು ಪರಾರಿ ಆಗುತ್ತಾನೆ. ಆತನಿಗೆ ಒಂದು ಹೆಣ್ಣಿನ ಜೀವನದ ಬಗ್ಗೆ ಯಾವುದೇ ರೀತಿಯ ಪಶ್ಚಾತ್ತಾಪವು

ಆಗುವುದಿಲ್ಲ. ಮರಿಯಮ್ಮ ದಳ್ಳಾಳಿ ಇವರೆಲ್ಲರಿಗೂ ಅವರ ಸ್ವಾರ್ಥ ಸಾಧನೆಯೆ ಮುಖ್ಯವಾಗಿಬಿಡುತ್ತದೆ. ಇವರೆಲ್ಲರ ಕುತಂತ್ರಕ್ಕೆ ಬಲಿಪಶುವಾಗುವವಳು ಮಾತ್ರ ಜುಲೇಕ. ಇಲ್ಲಿ ಇವಳ ಶೈಕ್ಷಣಿಕ ಬಡತನವನ್ನು ಕಾಣಬಹುದು. ಮದುವೆ ಸಂಸಾರದ ಬಗ್ಗೆ ಆಶಾಗೋಪುರವನ್ನು ಕಟ್ಟಿಕೊಂಡು ಹೊಸ ಬಾಳಿಗೆ ಕಾಲಿಡುವ ಜುಲೇಕ ಕೊನೆಗೆ ಮೋಸಕ್ಕೆ ಒಳಗಾಗಿ ತನ್ನ ಜೀವನಕ್ಕೆ ತಾನೇ ಮೂಕ ಪ್ರೇಕ್ಷಕಿಯಾಗಿ ನಿಲ್ಲುತ್ತಾಳೆ. ವ್ಯವಸ್ಥೆಯನ್ನು ಎದುರಿಸಲು ಅವಳಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆ ಕಾಣುತ್ತೇವೆ.

ಶಿಕ್ಷಣ ಪ್ರತಿಯೊಂದು ಹೆಣ್ಣಿಗೂ ಅಗತ್ಯ, ಅವಳ ಭವಿಷ್ಯತ್ತಿನ ದೃಷ್ಟಿಯಿದಲಾದರೂ ಶಿಕ್ಷಣ ಮಹತ್ವದ ಪಾತ್ರವನ್ನು ವಹಿಸುತ್ತದೆ.

'ನಿಯಮ ನಿಯಮಗಳ ನಡುವೆ' ಈ ಕತೆಯಲ್ಲಿ ಜೋಹರಳಿಗೆ ಗಂಡ ಖಾದರ್ ಕಿವಿಯ ಆಲಿಕತ್ತು ಮತ್ತು ಬೆಂಡೋಲೆ ಕೇಳಿದ ಕೂಡಲೆ ಕೊಡಲಿಲ್ಲ ಎಂಬ ಕಾರಣಕ್ಕೆ ತಲಾಖ್ ನೀಡಿರುತ್ತಾನೆ. ಜೋಹಾರ್‌ಳಿಗೆ ಮಮ್ತಾಜ್ ಎಂಬ ಐದು ವರ್ಷದ ಹೆಣ್ಣು ಮಗು ಹಾಗೂ ಮೂರು ವರ್ಷದ ಕಲೂಫ್ ಎಂಬ ಗಂಡು ಮಗು ಇರುತ್ತದೆ. ಅದು ಅಲ್ಲದೆ ಆಕೆ ತುಂಬಿದ ಬಸುರು. ಈ ಸ್ಥಿತಿಯಲ್ಲಿ ಗಂಡನಿಂದ ತಲಾಖ್ ಪಡೆದು ತವರಿನಲ್ಲಿ ಇರಬೇಕಾದ ಪರಿಸ್ಥಿತಿ ಜೋಹಾರ್‌ಳದು. ತವರು ಮನೆಯಲ್ಲಿ ಚಾಕರಿ ಮಾಡಿ ಅವರಿಂದ ನಿಂದನೆಗೆ ಗುರಿಯಾಗಿ ಅವರ ಕೊಟ್ಟ ಎರಡು ಪಾವನಿನಿಂದ ಕಿವಿಗೆ ಆಭರಣ ಮಾಡಿಸಿ ಆಕೆಯ ತಾಯಿ ಆಕೆಯನ್ನು ಖಾದರ್‌ನಿಗೆ ಮದುವೆ ಮಾಡಿಕೊಟ್ಟಿದ್ದಳು. ಕೊನೆಗೆ ಖಾದರ್ ಆಕೆಯನ್ನು ಪುನರ್ ವಿವಾಹವಾಗುವುದಾಗಿ ಹೇಳಿ ಕಳುಹಿಸುತ್ತಾನೆ. ಆದರೆ ಪುನರ್ ವಿವಾಹವಾಗಲು ಮುಸ್ಲಿಂ ವಿವಾಹದ ಪ್ರಕಾರ ಆಕೆ ಬಜ್ಜಿತ್ ಮಾಡಿಕೊಳ್ಳಬೇಕು. ಇಲ್ಲಿ ಜೋಹರ್‌ಳ ಒಪ್ಪಿಗೆಯನ್ನು ಯಾರೂ ಕೇಳುವುದೇ ಇಲ್ಲ. ಪ್ರಕೃತಿ ವಿರುದ್ಧ ಹೋಗಿ ನಿರಪರಾಧಿಯಾದ ಜೋಹಾರ್‌ಳ ಬಾಳನ್ನು ಜೀವನವನ್ನು ಬಲಿ ತೆಗೆದುಕೊಳ್ಳುತ್ತಾರೆ. ಜೋಹಾರ್‌ಳಿಗೆ ಬದುಕಿನಲ್ಲಿ ಕೊನೆಗೂ ಗಂಡ ಎಂದರೇನು ? ತಾನು ಕಷ್ಟಪಟ್ಟು ದುಡಿದ ಒಡವೆ ಕೊಡುವುದಿಲ್ಲವೆಂದದ್ದು ಮಹಾಪರಾಧವಾಯಿತೇ ? ಅದಕ್ಕಾಗಿ ತನ್ನನ್ನು

ತನ್ನ ಸ್ವಂತ ಮಕ್ಕಳನ್ನು ನಿರ್ಗತಿಕರನ್ನಾಗಿ ಮಾಡಬೇಕೆ ? ಗಂಡ ಹೆಂಡತಿಯ ಸಂಬಂಧ ಮೂರು ಬಾರಿ ತಲಾಖ್ ಎಂದೊಡನೆ ಮುಗಿದು ಹೋಯಿತೆ, ತಾನು ಕೂಡ ಹೀಗೆಯೆ ಮೂರು ಬಾರಿ ತಲಾಖ್ ಶಬ್ದಗಳನ್ನು ಎಚ್ಚರಿಸಿ ಆತನನ್ನು ಬಿಡುಗಡೆಗೊಳಿಸಬಹುದು. ಎಂಬ ಪ್ರಶ್ನೆಗಳು ಪ್ರಶ್ನೆಗಳಾಗಿ ಆಕೆಯ ಬಾಳು ಕೊನೆತನಕ ಉಳಿಯುತ್ತದೆ ವಿನಃ ಉತ್ತರ ಸಿಕ್ಕುವುದಿಲ್ಲ. ಇದು ಬರೀ ಜೋಹಾರ್‌ಳ ಪ್ರಶ್ನೆಯಲ್ಲ. ಮುಸ್ಲಿಂ ಮಹಿಳೆಯರ ಜೀವನದ ದುಸ್ಥಿತಿಯ ಚಿತ್ರಣವಾಗಿದೆ.

ವೈದೇಹಿರವರು ಕೂಡ ಶೈಕ್ಷಣಿಕ ಬಡತನದ ಬಗ್ಗೆ ತಿಳಿಸಿದ್ದಾರೆ. 'ಅಕ್ಕು' ಕತೆಯಲ್ಲಿ ಕೇಂದ್ರಬಿಂದು ಹಣೆಯಲ್ಲಿ ದೊಡ್ಡದಾದ ಕುಂಕುಮ ಇದೆ, ಕತ್ತಿನಲ್ಲಿ ಕರಿಮಣಿ ಸರವಿದೆ. ಗಂಡನಿಲ್ಲ, ಕೆಣಕಿದವರಿಗೆಲ್ಲ ಮುಟ್ಟಿ ನೋಡಿಕೊಳ್ಳುವಂತೆ ಉತ್ತರಿಸುವ ವಿಲಕ್ಷಣೆ. ಆದರೆ ಅಕ್ಕು ಮಾತ್ರ ಮಾನಸಿಕ ಸ್ಥಿಮಿತತೆ ಕಳೆದುಕೊಂಡಿದ್ದಾಳೆ. ಇದಕ್ಕೆಲ್ಲ ಕಾರಣ ಕುಟುಂಬ ಮತ್ತು ಸಮಾಜ. ಅಕ್ಕು ಮದುವೆಯಾದರೂ ಸಾಂಸಾರಿಕ ಸುಖದಿಂದ ವಂಚಿತಳಾದ ನತದೃಷ್ಟೆ. ಕಟ್ಟಿಕೊಂಡ ಗಂಡ ಮದುವೆಯಾದ ಮನೆಬಿಟ್ಟು ಹೋಗುತ್ತಾನೆ. ಅಂದಿನಿಂದ ಅಕ್ಕು ತನ್ನ ಸುಪ್ತ ತಳದ ಬಯಕೆಗಳು ಈಡೇರದೆ, ಪುರುಷನ ವಂಚನೆಗೆ ಒಳಗಾಗಿ ಸಂಪ್ರದಾಯದ ಚೌಕಟ್ಟಿನಲ್ಲಿ ಸಿಲುಕಿಕೊಂಡು ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಳ್ಳುತ್ತಾಳೆ. ಒಂದು ಕಡೆ ಅಕ್ಕು ನೋವು, ಅಪಮಾನ, ದಮನಗಳ ಮೂರ್ತಿಯಾಗಿ ಕಾಣಿಸಿದರೆ ಮತ್ತೊಂದೆಡೆ ಅವಳು ಹುಚ್ಚಿನಲ್ಲಿ ಆಡುವ ಮಾತು, ತೋರುವ ಪ್ರತಿಕ್ರಿಯೆ ಸಮಾಜದಲ್ಲಿನ ಮಾನವ ಸಂಬಂಧಗಳ ಶಿಥಿಲತೆ, ಲೈಂಗಿಕ ಸಂಬಂಧಗಳ ಗೋಜಲುಗಳ ಬಗ್ಗೆ ಮೌಲ್ಯಗಳ ಬಗ್ಗೆ ಮತ್ತು ಸಮಾಜದ ಅಮಾನವೀಯತೆಯ ಕ್ರೌರ್ಯಕ್ಕೆ ಬಾಷ್ಯವಾಗುತ್ತದೆ. ಆದರೆ ಇಲ್ಲಿ ಈಕೆಯ ಮಾತಿಗೆ ಮನ್ನಣೆ ದೊರಕುವುದಿಲ್ಲ.

ಇಲ್ಲಿ ಬರುವ ಪುರುಷ ಪಾತ್ರಗಳಾದ ಅಜ್ಜಯ್ಯ, ವಾಸು, ಚಿಕ್ಕಪ್ಪಯ್ಯ ಮುಂತಾದವರು ಆಕೆಯನ್ನು ದೈಹಿಕವಾಗಿಯು ಹೊಡೆದು ಬಡಿದು ಹಿಂಸಿಸುತ್ತಾರೆ. ಒಬ್ಬ ಹೆಣ್ಣಾಗಿಯು ಇವರ ದೊಡ್ಡತ್ತೆ

ಮುಂತಾದವರು ಹೊಡೆಯುವವರಿಗೆ ಬೆಂಬಲವಾಗಿ ನಿಲ್ಲುತ್ತಾರೆ. ಇದು ಮಹಿಳಾ ಸಮುದಾಯದ ದುರಂತ. ಇವರಿಗೆಲ್ಲಾ ಅಕ್ಕು ಒಂದು ಬಗೆಯ ಮನರಂಜನೆಯ ವಸ್ತುವಾಗುತ್ತಾಳೆಯೇ ವಿನಃ ಇವಳ ಮನದಾಳದ ನೋವನ್ನು ಯಾರೂ ಅರಿಯುವುದಿಲ್ಲ. ಅಕ್ಕುವಿಗೆ ತನ್ನ ಗಂಡನ ಮೇಲೆ ಎಷ್ಟು ತಿರಸ್ಕಾರವಿದೆ ಎಂದರೆ ಆತ ಮತ್ತೆ ಬಂದರೆ ಸೇರಬಿಡುವುದಿಲ್ಲ. ಸಂಸಾರದ ಕನಸು ಹೊತ್ತು ಹೊಸ ಬಾಳಿಗೆ ಕಾಲಿಟ್ಟ ಹೆಣ್ಣಿಗೆ ಗಂಡನಿಂದ ಆದ ವಂಚನೆ ಆಕೆಯ ಬಾಳನ್ನು ನಾಶಪಡಿಸುತ್ತದೆ. ಅಂದಿನಿಂದ ಆಕೆ ತನ್ನ ಮನಸ್ಸಿನ ಹತೋಟಿ ಕಳೆದುಕೊಂಡಾಗ ಆಕೆ ಆಡುವ ಪ್ರತಿಯೊಂದು ಮಾತೂ ಆಕೆ ಸಂಸಾರದ ಬಗ್ಗೆ ಕಟ್ಟಿದ ಸುಂದರ ಕನಸುಗಳ ರೂಪಗಳು, ಆಕೆ ಬಸುರಿ ಬಾಣಂತಿಯಾಗುವುದು ಮತ್ತು ಬೇರೆಯವರ ಮನೆಯಲ್ಲಿ ಶುಭ ಕಾರ್ಯವಾದಾಗ ಅಲ್ಲಿ ಪಾಲ್ಗೊಳ್ಳುವುದು ಮತ್ತು ಆಕೆ ತಾವು ಬೇರೆಯವರ ಜೊತೆ ಸಂಬಂಧ ಹೊಂದಿದ್ದೇವೆ ಎಂದು ಹೇಳುವುದು, ಎಲ್ಲ ಅವಳ ಮನದಾಳದಲ್ಲಿ ಅಡಗಿದ್ದು, ಸುಪ್ತ ಬಯಕೆಗಳು ಸಿಡಿದು ಪ್ರತಿಭಟನೆಯ ರೂಪದಲ್ಲಿ ಹೊರಹೊಮ್ಮಿದವುಗಳಾಗಿವೆ.

ಅಕ್ಕುವಿಗೆ ಎಲ್ಲರ ಜೊತೆ ಅವರ ಕಷ್ಟದಲ್ಲಿ ಬೆರೆಯುವಂತಹ ಹೃದಯ ಶ್ರೀಮಂತಿಕೆ ಇದೆ. ಹೊಂದಿಕೊಡು ಸಹನೆಯಿಂದ ಬಾಳುವ ಗುಣವಿದೆ. ಅಂತೆಯೇ ಪುರುಷರನ್ನು ಆಕೆ ಸಂಪೂರ್ಣವಾಗಿ ದ್ವೇಷಿಸುತ್ತಾಳೆ. ಮಾನಸಿಕ ಸ್ಥಿಮಿತತೆ ಕಳೆದುಕೊಂಡು ಅಕ್ಕುವಿನಲ್ಲಿ ನಾವು ಮಾನವೀಯ ಮೌಲ್ಯಗಳನ್ನು ಕಾಣಬಹುದು. ಆದರೆ ಮಾನಸಿಕವಾಗಿ ಸ್ವಾಸ್ಥ್ಯ ಇರುವವರಲ್ಲಿ ನಾವು ಅದನ್ನು ಕಾಣಲಾಗುವುದಿಲ್ಲ.

ಹೀಗೆ ಅಕ್ಕುವಿನ ಜೀವನ ದುರಂತತೆಯನ್ನು ಕಾಣುತ್ತೇವೆ. ಇಲ್ಲಿ ಶೈಕ್ಷಣಿಕ ಬಡತನವನ್ನು ಇವಳ ವ್ಯಕ್ತಿತ್ವದಿಂದ ಕಾಣಲಾಗುತ್ತದೆ. ವೈದೇಹಿಯವರ ಮತ್ತೊಂದು ಕತೆ 'ಗುಲಾಬಿ ದೂಕೀಸು ಮತ್ತು ಅಲೆಗಳು' ಕತೆಯಲ್ಲಿ ಬರುವ ಊರಿನ ವರ್ಣನೆ ಮತ್ತು ಅಲ್ಲಿನ ಜನರ ಜೀವನದ ವರ್ಣನೆ ಹೆಣ್ಣು ಮಕ್ಕಳ ಸ್ಥಿತಿ ನೋಡಿದರೆ ಅದೊಂದು ಇನ್ನು ಸ್ವಾತಂತ್ರ್ಯ ಸಿಕ್ಕಿರದ ಕಾಲವಾಗಿರಬೇಕು ಎನಿಸುತ್ತದೆ. ಅಲ್ಲಿ ಸ್ತ್ರೀಯರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿರಲಿಲ್ಲ. ಆಕೆಯು ಸಹ ಕುಟುಂಬದ ಹೊಣೆ ಹೊತ್ತು

ಮಕ್ಕಳ ಲಾಲನೆ ಪಾಲನೆಯಲ್ಲಿ ಜೀವನ ನಡೆಸುತ್ತಿದ್ದ ಕಾಲ. ಆಗ ಸ್ತ್ರೀಯರು ಪ್ರತಿಯೊಂದನ್ನು ಗಂಡಸರನ್ನು ಅವಲಂಬಿಸುತ್ತಿದ್ದರು. ಆಗಿನ ಕಾಲದಲ್ಲಿ ಸಿನಿಮಾ ನೋಡಲು ಹೋಗುವವರನ್ನು ಕೀಳಾಗಿ ಕಾಣುತ್ತಿತ್ತು. ಅಂತಹ ಸಂದರ್ಭದಲ್ಲಿ ಲಿಲ್ಲಿಬಾಯಿ ಎಂಬ ಆ ಊರಿನ ಸೂಲಗಿತ್ತಿ ಆ ಊರಿನ ಸಿನಿಮಾ ಟಾಕೀಸಿನ ಹೆಂಗಸರ ಕಡೆಯ ಟಿಕೇಟು ಹರಿಯುವ ಕೆಲಸಕ್ಕೆ ಸೇರುತ್ತಾಳೆ. ಅವಳಿಗೆ ಮೊದಲಿನ ಕೆಲಸದಲ್ಲಿ ಸಿಗುತ್ತಿದ್ದ ಹಣಕ್ಕಿಂತ ಹೆಚ್ಚು ಸಂಪಾದನೆಯಾಗುತ್ತಿದ್ದುದು ಅಲ್ಲಿನ ಗಂಡಸರಿಗೆ ಹಿಡಿಸಲಿಲ್ಲ. ಅನಂತರ ಅಲ್ಲಿಯ ಮ್ಯಾನೇಜರ್‌ನ ಅನೈತಿಕ ಸಂಬಂಧ ತಿಳಿದು ಅವನಿಗೆ ಬುದ್ಧಿ ಕಲಿಸಲು ಎಲ್ಲರೊಂದಿಗೆ ಹೇಳಿದಾಗ ತನ್ನ ಕೆಲಸ ಕಳೆದುಕೊಂಡು ಮೊದಲಿನಂತೆ ಸೂಲಗಿತ್ತಿಯ ಕೆಲಸದಲ್ಲೆ ತೊಡಗುತ್ತಾಳೆ.

ಇಲ್ಲಿ ಆ ಹೆಣ್ಣು ತಾನು ಪುರುಷನ ವಿರುದ್ಧ ನಿಂತ ತಪ್ಪನ್ನು ತೋರಿಸಿಕೊಟ್ಟ ಮತ್ತು ಪುರುಷನನ್ನು ಎದುರಿಸಿ ನಿಂತ ಪರಿಣಾಮ ಎಷ್ಟು ಘೋರವಾಗಿರುತ್ತದೆ ಎಂಬುದನ್ನು ತಿಳಿದುಕೊಳ್ಳಬಹುದು. ಅಂತೆಯೆ ಪುಟ್ಟಮ್ಮತ್ತೆ ಮತ್ತು ಮೊಮ್ಮಕ್ಕಳು ಕತೆಯಲ್ಲಿ ಪೀಳಿಗೆಗಳ ಸಂಘರ್ಷವಿದೆ. ಪುಟ್ಟಮತ್ತೆ ಓರ್ವ ಸಾಮಾನ್ಯ ವರ್ಗದ ಹೆಣ್ಣಾಗಿ ಪಟ್ಟಪಾಡು ಅಷ್ಟಿಷ್ಟಲ್ಲ. ಮದುವೆ ಸಂಸಾರ ಸುಖ ಏನೆಂದು ಚೆನ್ನಾಗಿ ಬಲ್ಲವಳು. ತಾಯಿಯನ್ನು ಕಳೆದುಕೊಂಡ ಮೊಮ್ಮಗಳು ಕಲಾವತಿಯನ್ನು ಈಕೆಯೆ ಸಾಕಿ ಸಲಹುತ್ತಾಳೆ. 'ಪುರುಷರು ಮೃಗ' ಎಂದು ಹೇಳುವಷ್ಟು ವಿಲಕ್ಷಣ ಪ್ರಪಂಚದಲ್ಲಿ ಬದುಕಿದಾಕೆ. ಆದರೆ ಕಮಲಾವತಿ ಪ್ರಾಯದ ಹುಡುಗಿ. ಸುತ್ತಲ ಪ್ರಪಂಚವನ್ನು ಸೂಕ್ಷ್ಮವನ್ನು ಗಮನಿಸುತ್ತಾಳೆ. ಅದಕ್ಕೆ ಪ್ರತಿಕ್ರಿಯಿಸುತ್ತಾಳೆ. ಆಕೆ ಅನ್ಯಾಯದ ವಿರುದ್ಧ ಸೆಟೆದು ನಿಲ್ಲುತ್ತಾಳೆ. ತನ್ನ ಕಾಲ ಮೇಲೆ ತಾನು ನಿಲ್ಲಬೇಕು ಎಂಬ ಆತ್ಮವಿಶ್ವಾಸ. ಆದರೆ ಅಜ್ಜಿಗೆ ಇದು ಅರ್ಥವಾಗದು. ಕಮಲಾವತಿ ಐದು ಮೈಲಿ ದೂರದ ಊರಿನಲ್ಲಿ ರೆಡಿಮೇಡ್ ಬಟ್ಟೆ ಹೊಲಿಯುವಲ್ಲಿ ಕೆಲಸಕ್ಕೆ ಸೇರುತ್ತಾಳೆ. ಇದರಿಂದ ಜನರ ಬಾಯಿಗೆ ತುತ್ತಾಗಿ ಮದುವೆ ತಪ್ಪಿ ಹೋಗುತ್ತದೆ. ಆಕೆಯ ಸೆರಗನ್ನು ಯಾರೊ ಹಿಡಿದನೆಂದು ಅವನ ಕಣ್ಣಿಗಷ್ಟು ಹೊಯಿಗೆ ಜೊಗೆದು ಮುಂಡುಗನ ಓಲಿಯ ಬೇಲಿಯ ಮೇಲೆ ಮಾಡಿ ಹಾಕಿ ಬಂದಳು. ಆದರೆ ಅವಳ ಮನಸ್ಸನ್ನು ಪುಟ್ಟಮತ್ತೆಯಾಗಲಿ, ಊರ ಜನರಾಗಲಿ ಅರ್ಥ ಮಾಡಿಕೊಳ್ಳುವುದಿಲ್ಲ. ಅವಳು ತನ್ನ ಜೀವನವನ್ನು

ಯಾರ ಹಂಗಿಗೂ ಅಧೀನಕ್ಕೆ ಒಳಪಡಿಸಿಕೊಳ್ಳಲು ಇಚ್ಛಿಸದೆ ಸ್ವತಂತ್ರವಾಗಿ ದುಡಿಯುವುದಕ್ಕೆ ಮುಂದಾದರೆ ಸಮಾಜ ಆಕೆಯನ್ನು ನೋಡುವ ದೃಷ್ಟಿಯೇ ಬೇರೆ. ಮನೆಯೊಳಗಿರುವ ಹೆಣ್ಣಿಗೆ ಒಂದು ಚಿಂತೆ, ಮನೆಯ ಹೊರಗಿರುವ ಹೆಣ್ಣಿಗೆ ನಾನಾ ರೀತಿ ಸಮಸ್ಯೆಗಳು ಕಮಲವತಿಯಂತಹವರು ಅವಿದ್ಯಾವಂತ, ಅನಾಥ, ಬಡತನದಿಂದ ಬೇಸತ್ತು ಸ್ವಾವಲಂಬನೆಗಳು ಹೊಸ ಹಾದಿಯನ್ನು ಆರಿಸಿಕೊಂಡವರು ಪುರುಷರ ಕಪಿಮುಷ್ಠಿಯಲ್ಲಿ ಸಿಲುಕಿ ನಲುಗಿ ಹೋಗುತ್ತಾರೆ. ಕಮಲಾವತಿಯಂತವರ ಶೈಕ್ಷಣಿಕ ಬಡತನವನ್ನು ನಾವು ಕಾಣಬಹುದಾಗಿದೆ. ಕಮಲಾವತಿ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವುದೇ ಅವಳ ಎಲ್ಲಾ ಸಮಸ್ಯೆಗೂ ಗುರಿಯಾಗುತ್ತದೆ ಎಂದು ಹೇಳಬಹುದು.

ವೈದೇಹಿಯವರ 'ಆರಕ್ಷಿತ' ಕಥೆಯಲ್ಲಿ ಕಥಾನಾಯಕಿ ಕೈಜುಮ್ಮ ಅನುಭವಿಸುವ ನೋವು ಮನೆ ಯಜಮಾನನಿಂದಾಗಿ ಅಪಮಾನ ಮತ್ತು ಗಂಡನ ಬೇಜವಾಬ್ದಾರಿತನವೆಲ್ಲವು ಆಕೆಯನ್ನು ಮಾನಸಿಕವಾಗಿ ಕುಗ್ಗಿಸುತ್ತವೆ. ಕೊನೆಗೆ ಮನೆಗೆ ಆಧಾರವಾದ ಒಬ್ಬ ಮಗನನ್ನು ಕಳೆದುಕೊಳ್ಳುವ ಸ್ಥಿತಿ ಬರುತ್ತದೆ.

ಕೈಜುಮ್ಮಳಿಗೆ ಏಳು ಜನ ಹೆಣ್ಣು, ಒಬ್ಬ ಗಂಡು ಮಗ ಇರುತ್ತಾನೆ. ಗಂಡ ಉಸ್ತಾದ್ ತರೀಕೆರೆ ಎಂಬಲ್ಲಿ ವ್ಯಾಪಾರ ಮಾಡಿಕೊಂಡಿದ್ದಾನೆ. ಇದರಿಂದ ಆತ ಆರು ತಿಂಗಳುಗಳಿಗೆ, ವರ್ಷಕ್ಕೆ ಮನೆಗೆ ಬರುತ್ತಾನೆ. ಹೆಂಡತಿ ಕೈಗೆ ಅಷ್ಟು ಇಷ್ಟು ಹಣ ನೀಡುತ್ತಾನೆ. ಆಕೆ ಆ ಹಣದಿಂದಲೇ ಆತ ಮತ್ತೊಮ್ಮೆ ಊರಿಗೆ ಬರುವವರೆಗೆ ಸಂಸಾರ ನಡೆಸಬೇಕು. ಗಂಡನೊಂದಿಗೆ ಕೈಜುಮ್ಮ ಮನೆಯ ಕಷ್ಟ ಹೇಳಿದರೆ ಆತ ಹೇಳದೆ, ಕೇಳದೆ ಹೊರಟು ಹೋಗುತ್ತಾನೆ.

ಇಂತಹ ಪರಿಸ್ಥಿತಿಯಲ್ಲಿ ಕೈಜುಮ್ಮ ಮಗಳ ಮದುವೆ ಮಾಡುತ್ತಾಳೆ. ಅದಕ್ಕಾಗಿ ಸುಮಾರು ಅನುಕೂಲವಾಗಿರುವ ಮನೆಗೆ ಬಾಡಿಗೆಗೆ ಹೋಗಿರುತ್ತಾಳೆ. ಆದರೆ ಮಾಲೀಕ ನೀಡಿದ ವಾಯಿದೆ ಮುಗಿದ ಕಾರಣ ಮನೆ ಬಿಡುವಂತೆ ಹಿಂಸೆ ಮಾಡಿ ಕೊನೆಗೆ ತನ್ನ ಸಂಸಾರವನ್ನು ಅದೇ ಮನೆಯಲ್ಲಿ ಹೂಡುತ್ತಾ ಇತ್ತ ಅಳಿಯ ಮಗಳನ್ನು ಬಾಣಂತನಕ್ಕೆ ಕರೆಸಿಕೊಳ್ಳಬೇಕೆಂದು ಒತ್ತಡ ತರುತ್ತಾನೆ. ಇಂತಹ ಉಸಿರು

ಕಟ್ಟಿಸುವ ಪರಿಸ್ಥಿತಿಯಲ್ಲಿ ಕೈಜುಮ್ಮ ಗಂಡನಿಗೆ ಪತ್ರಹಾಕಿ ಆತನಿಂದ ಯಾವ ಉತ್ತರ ಬರದ ಕಾರಣ ತನ್ನ ಒಬ್ಬನೆ ಮಗನಾದ ಹಮೀದ್‌ನನ್ನು ಹುಡುಕಲು ಕಳುಹಿಸುತ್ತಾಳೆ. ಆದರೆ ಅಲ್ಲಿ ಹಿಂದು ಮುಸ್ಲಿಂ ಗಲಾಟೆಯಲ್ಲಿ ಮಗನ ಪರಿಸ್ಥಿತಿಯು ಏನಾಯಿತೆಂದು ಕಾಣದೆ, ಹೀಗೆ ಇವಳ ಅವಿವೇಕದಿಂದಾಗಿ ತನ್ನ ಮಗನನ್ನು ಕಳೆದುಕೊಳ್ಳುತ್ತಾಳೆ. ಶಿಕ್ಷಣದ ಕೊರತೆಯೇ ಇಂತಹ ಅನಾಹುತಕ್ಕೆ ಕಾರಣವೆಂದು ಹೇಳಲಾಗುತ್ತದೆ.

'ಒಂದು ಕಳ್ಳ ವೃತ್ತಾಂತದ' ನಾಯಕಿ ಬಚ್ಚಮ್ಮ ಮದುವೆಯಾಗಿ ಹೋದ ಬಳಿಕ ತನಗೆ ಬೇಕಾದ ಹಾಗೆ ಜೀವನ ನಡೆಸಬೇಕು ಎಂಬೆಲ್ಲ ಕನಸು ಕಂಡಿರುತ್ತಾಳೆ. ಆದರೆ ಆಕೆಗೆ ಸಿಕ್ಕಿದ ಗಂಡ ಬೇರೆಯವರ ಅಡಿಯಾಳಾಗಿ ದುಡಿದು ತನ್ನ ಹೆಂಡತಿ ಮಕ್ಕಳನ್ನು ಸಾಕಲು ಅವನು ಅಶಕ್ತನಾಗಿರುತ್ತಾನೆ. ಹಾಗಾಗಿ ಓದು ಬರಹ ಬಾರದ ಬಚ್ಚಮ್ಮ ಬೇರೆಯವರ ಮನೆಯಲ್ಲಿ ಕೆಲಸ ಮಾಡತೊಡಗುತ್ತಾಳೆ. ಇಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ಕಾಣಲಾಗುತ್ತದೆ. ತಾನೆಷ್ಟು ದುಡಿದರು ಸಂಸಾರದ ನೊಗ ಎಳೆಯಲು ಕಷ್ಟವಾದಾಗ ಮತ್ತು ಯಜಮಾನತಿಯು ಜಿಪುಣರಂತೆ ವರ್ತಿಸಿ ಅವರಿಗೆ ಏನನ್ನು ನೀಡದೆ ಇದ್ದಾಗ ಅನಿವಾರ್ಯವಾಗಿ ಈಕೆ ಕದಿಯುವ ಕೆಲಸಕ್ಕೆ ಇಳಿಯುತ್ತಾಳೆ. ಈ ರೀತಿಯಲ್ಲಿ ಅವಳು ಸಣ್ಣಪುಟ್ಟ ವಸ್ತು ಕದ್ದು ಊರವರ ಮುಂದೆ ಕಳ್ಳಿ ಎಂಬ ಪಟ್ಟವನ್ನು ಕಟ್ಟಿಕೊಂಡೆ ಬದುಕು ದೂಡುತ್ತಾಳೆ. ಇಲ್ಲಿ ಆಕೆಯ ಅನಕ್ಷರತೆ ಅಂದರೆ ಶೈಕ್ಷಣಿಕ ಬಡತನದ ಪರಿಕಲ್ಪನೆಯು ಎದ್ದು ಕಾಣುವಂತಹ ಅಂಶವಾಗಿದೆ ಎಂದು ಹೇಳಬಹುದು.

ಕಥೆಯು ಆರಂಭದಲ್ಲಿ ಹೀಗೆ. ಹೇಳುತ್ತದೆ. ಬಚ್ಚಮ್ಮನಿಗೆ ಕದಿಯುವ ಹವ್ಯಾಸವೇನೂ ಹುಟ್ಟಿನಿಂದ ಬಂದದ್ದಲ್ಲ, ತವರು ಮನೆಯಲ್ಲಿ ಕಿತ್ತು ತಿನ್ನುವ ಬಡತನ, ಗಂಡನ ಮನೆಯಲ್ಲಾದರು ಸುಧಾರಣೆ ಮಾಡಿಕೊಳ್ಳೋಣವೆಂದರೆ ಅಲ್ಲಿ ಅದಕ್ಕಿಂತಲೂ ಘೋರ, ಬಚ್ಚಮ್ಮನಿಗೆ ದಿನ ಚೆನ್ನಾಗಿ ಊಟ ಮಾಡಿಕೊಂಡಿರಬೇಕೆಂಬ ಆಸೆ. ಆದರೆ ಬಡತನದಿಂದ ಆಕೆಗೆ ಹಾಗಿರಲು ಸಾಧ್ಯವಿಲ್ಲ. ಗಂಡ

ನಿಷ್ಠಾವಂತ, ಕಾಮತ್ತರ ಅಂಗಡಿಯಲ್ಲಿ ಕೆಲಸಕ್ಕಿರುವಾತ, ಮನೆಗಾಗಿ ಏನನ್ನೂ ಮಾಡಿಕೊಂಡವನಲ್ಲ. ಆದರೆ ಹೆಂಡತಿ ಕದ್ದು ತಂದು ಅಡಿಗೆ ಮಾಡಿದರೆ ಗಡಾದ್ದಾಗಿ ತಿಂದು ಹಾಗೆಲ್ಲ ಮಾಡಬಾರದು ಎಂದು ತಿಳಿ ಹೇಳುತ್ತಿದ್ದ. ಬಚ್ಚಮ್ಮನ ಮಗನಿಗೂ ತಾನು ಎಲ್ಲರಂತೆ ಸ್ವತಂತ್ರನಾಗಿ ಜೀವಿಸಬೇಕು, ಸಮಾಜದಲ್ಲಿ ಉನ್ನತ ಸ್ಥಾನದಲ್ಲಿ ಬದುಕು ನಡೆಸಬೇಕೆಂಬ ಆಸೆ. ಆದರೆ ಅವನು ವಿದ್ಯಾಭ್ಯಾಸದಲ್ಲಿ ಕೆಳಮಟ್ಟದಲ್ಲಿರುತ್ತಾನೆ. ಇದು ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ತೋರಿಸುತ್ತದೆ. ಕೊನೆಗೆ ಆತನು ಕಳ್ಳತನದಿಂದಾಗಿ ಮುಂದೆ ಬರಲು ಯೋಚಿಸುತ್ತಾನೆ.

ತಿಮ್ಮರಾಯನ ಹೆಂಡತಿ, ಗಜಾನನ ಭಟ್ಟ, ಕಾಮತರು ಇವರೆಲ್ಲ ಸ್ವಲ್ಪ ಔದಾರ್ಯತೆಯಿಂದ ನಡೆದು ಕೊಂಡಿದ್ದರು ಸಹ ಬಚ್ಚಮ್ಮ ಕಳ್ಳಿಯಾಗುತ್ತಿರಲಿಲ್ಲ. ಅವರ ಅಮಾನವೀಯ ವರ್ತನೆ ಬಡತನ, ಅಶಿಕ್ಷಣ, ಇವೆಲ್ಲ ಬಚ್ಚಮ್ಮನನ್ನು ಆ ಪರಿಸ್ಥಿತಿಗೆ ದೂಡುತ್ತದೆ. ಇದು ಬರಿ ಬಚ್ಚಮ್ಮನ ಸ್ಥಿತಿಯಲ್ಲ. ಇಂಥ ಕ್ರೌರ್ಯಕ್ಕೆ ಸಮಾಜದಲ್ಲಿ ಬಚ್ಚಮ್ಮನಂತಹ ಮಹಿಳೆಯರು ಬಲಿಯಾಗುತ್ತಿದ್ದಾರೆ.

'ಅವಲಂಬಿತರು' ಕತೆಯಲ್ಲಿ ಅಹಲ್ಯ, ಕತೆಯ ನಾಯಕಿ. ಇಲ್ಲಿ ಹಸಿವು, ಇರುವ ಸ್ಥಿತಿಯ ಮುಂದೆ ಮತ್ತೂ ದೈನೇಸಿಯಾಗುವಂತೆ ಮಾಡುತ್ತದೆ. ಇಲ್ಲಿ ಬಡತನದ ಕಾರಣ ಆಕೆಯ ತಾಯಿ ಬೇರೆಯವರ ಮನೆಯಲ್ಲಿ ಕೆಲಸಕ್ಕೆ ಹಾಕುತ್ತಾಳೆ. ಅಲ್ಲಿ ಈಕೆಯನ್ನು ಸಾಕುತ್ತಿದ್ದೇನೆ ಎಂದು ಅಹಂಕಾರಪಡುವ ಘಟಕವು ತನ್ನ ಭಾರವನ್ನು ಹುಡುಗಿಯ ಮೇಲೆ ಹಾಕುತ್ತಾರೆ. ಆದರೆ ಇಲ್ಲಿ ನಿಜವಾದ ಅವಲಂಬಿತರು ಅಹಲ್ಯಯಲ್ಲಿ ಅವಳನ್ನು ಸಾಕುತ್ತಿರುವವರು ಹೀಗೆ ವ್ಯವಸ್ಥೆಯಲ್ಲಿ ಹೇಳುವ ಅವಲಂಬನೆ ಅರ್ಥ ತಿರುಗು ಮುರುಗಾಗುತ್ತದೆ.

ಶಾರದೆಗೆ ತನ್ನ ಮಗುವನ್ನು ಅಹಲ್ಯಯಂತೆ ನೋಡಿಕೊಳ್ಳಲು ಬರುವುದಿಲ್ಲ. ಶಾರದೆಗೆ ಒಬ್ಬ ತಾಯಿಯಾಗಿ ಮಗುವಿನ ಜವಾಬ್ದಾರಿಯನ್ನು ಆಟ ಆಡುವ ಹುಡುಗಿ ಅಹಲ್ಯೆಗೆ ವಹಿಸಿದ್ದರೂ ಆಕೆ ಮಗುವನ್ನು ತಾಯಿಗಿಂತ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ಚಿಕ್ಕ ವಯಸ್ಸಿನಲ್ಲೆ ಸಂಸಾರದ ನೊಗವನ್ನು

ಹೊತ್ತುಕೊಂಡು ಅಹಲ್ಯೆಯ ಕೆಲಸ ಶ್ರದ್ಧೆ ಮೆಚ್ಚಬೇಕಾದದ್ದು. ಒಡತಿ ಎಷ್ಟೇ ಟೀಕಿಸಿದರೂ ಆಕೆ ಮಾತ್ರ ಕೆಲಸದಲ್ಲಿ ಹಿಂದೆ ಬೀಳುತ್ತಿರಲಿಲ್ಲ.

ಅಹಲ್ಯೆ ಚಿಕ್ಕ ವಯಸ್ಸಿನಲ್ಲೆ ಜೀವನದ ಸಾರವನ್ನು ಗ್ರಹಿಸುತ್ತಾಳೆ. ತನ್ನ ಒಡತಿಯ ಸಣ್ಣತನವನ್ನು ಅರಿತು ಪಕ್ಕದ ಮನೆಯ ಸುಶೀಲಕ್ಕನಿಗೆ ತನ್ನ ಕಷ್ಟವನ್ನು ಹೇಳಿಕೊಳ್ಳುತ್ತಾಳೆ. ತನ್ನ ಗಂಡನ ಬಗ್ಗೆ ಸಂಶಯಪಡುವ ಅಹಲ್ಯೆಯನ್ನು ಅನುಮಾನದ ದೃಷ್ಟಿಯಲ್ಲಿ ನೋಡುತ್ತಾಳೆ. ತಾನು ಒಡತಿ ಎಂಬ ದರ್ಪದಿಂದಲೆ ಅಹಲ್ಯೆಯನ್ನು ನೋಡುತ್ತಾಳೆಯೆ ವಿನಃ ಆಕೆಯನ್ನು ಪ್ರೀತಿ ವಿಶ್ವಾಸದಿಂದ ಕಾಣುವುದೇ ಇಲ್ಲ. ಆ ಚಿಕ್ಕ ಹುಡುಗಿಯ ಮುಗ್ಧ ಮನಸ್ಸನ್ನು ಅರಿಯುವುದಿಲ್ಲ. ಅವಳ ಪಾಲಿಗೆ ಎಲ್ಲರು ಶೋಷಕರೆ ಆಗುತ್ತಾರೆ. ಇದಕ್ಕೆ ಕಾರಣ ಶೈಕ್ಷಣಿಕ ಬಡತನವೇ ಎಂದು ಹೇಳಬಹುದು.

ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ಈ ಎಲ್ಲಾ ಕತೆಗಳಲ್ಲೂ ಕಾಣಲಾಗುತ್ತದೆ. ಕನ್ನಡ ಕಥಾ ಸಾಹಿತ್ಯದಲ್ಲಿ ಇವುಗಳ ಪಾತ್ರ ಮಹತ್ವದಾದುದು ಎಂದು ಹೇಳಬಹುದು ಕನ್ನಡ ಕಥಾ ಸಾಹಿತ್ಯದಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆ ಸ್ತ್ರೀಕೇಂದ್ರಿತ ಕತೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

ಪಿ. ಲಂಕೇಶ್‌ರವರ ಕತೆಗಳಲ್ಲಿ ಹೆಚ್ಚಾಗಿ ಕಂಡುಬರುವುದು ಬಡತನದ ಬಗ್ಗೆ ಇವರ 'ಮುಟ್ಟಿಸಿಕೊಂಡವನು' ಎಂಬ ಕತೆಯಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ಕಾಣುತ್ತೇವೆ. ಮುಟ್ಟಿಸಿಕೊಂಡವನು ಕತೆಯಲ್ಲಿ ಅಜ್ಞಾನದಿಂದಾಗಿ ಎಂತಹ ತೊಂದರೆ ಉಂಟಾಗುತ್ತದೆ ಎಂಬುದನ್ನು ಈ ಕತೆಯ ಮೂಲಕ ತಿಳಿಯಪಡಿಸಲಾಗಿದೆ.

ಬಸಲಿಂಗ ಒಬ್ಬ ಸಾಮಾನ್ಯ ರೈತ. ಇವನು ವ್ಯವಸಾಯ ಮಾಡಿಯೇ ತನ್ನ ಹೆಂಡತಿ ಮಕ್ಕಳನ್ನು ಸಾಕುತ್ತಿದ್ದನು. ಒಮ್ಮೆ ಇದ್ದಕ್ಕಿದ್ದ ಹಾಗೆ ಅವನಿಗೆ ಬಲಗಣ್ಣಿನಲ್ಲಿ ನೋವು ಕಾಣಿಸಿಕೊಳ್ಳುತ್ತದೆ.

ಹಲವಾರು ಆಸ್ಪತ್ರೆಯ ಔಷಧಿಗಳಿಂದ ಗುಣವಾಗದೇ ರೋಗ ಮತ್ತಷ್ಟು ಉಲ್ಬಣಗೊಂಡಿತ್ತು. ಯಾರೋ ಬುದ್ಧಿವಂತರ ಸಲಹೆಯಂತೆ ಅವನು ಡಾ. ತಿಮ್ಮಪ್ಪನ ಬಳಿ ಔಷಧಿಯನ್ನು ಪಡೆಯುತ್ತಾನೆ. ಅವರು ಹೇಳಿದ ಮಾರ್ಗದಲ್ಲಿ ನಡೆಯದೆ ಕಣ್ಣಿನ ಆಪರೇಷನ್ ಆದ ಅನಂತರದಲ್ಲಿ ತಿಮ್ಮಪ್ಪ ಹೊಲೆಯ ಜಾತಿಯವನು, ಅವನ ಮುಟ್ಟಿದನು ಎಂಬ ಕಾರಣಕ್ಕಾಗಿ ಆಪರೇಷನ್ ಮಾಡಿಸಿದರೂ ಸ್ನಾನ ಮಾಡಿ ಆ ಕಣ್ಣು ಬೇನೆ ಹೆಚ್ಚಾಗಿ ಆ ಕಣ್ಣಿನ ದೃಷ್ಟಿಯನ್ನೇ ಕಳೆದುಕೊಳ್ಳುತ್ತಾನೆ. ಇಲ್ಲಿ ಶೈಕ್ಷಣಿಕ ಬಡತನವನ್ನು ಕಾಣಬಹುದಾಗಿದೆ. ಮತ್ತೊಂದು ಕಣ್ಣಲ್ಲು ಇದೇ ರೀತಿಯಾದ ಬೇನೆ ಕಂಡುಬಂದಾಗ ಅವನಿಗೆ ಭಯವಾಗಿ ಅದನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ನಾವು ಈ ಕತೆಯಲ್ಲಿ ಕಾಣಬಹುದು. ಅದು ಅವನಲ್ಲಿ ಪಶ್ಚಾತ್ತಾಪ ಹೊಂದಿ ಪುನಃ ತಿಮ್ಮಪ್ಪ ವೈದ್ಯರ ಬಳಿಯೇ ಚಿಕಿತ್ಸೆ ಪಡೆಯುತ್ತಾನೆ. ಇಲ್ಲಿ ಶಿಕ್ಷಣವಿದ್ದರೆ ಯಾವ ಕೆಲಸದಿಂದ ಏನಾಗುತ್ತದೆ ಎಂಬ ಅರಿವಿರುತ್ತದೆ. ಇಲ್ಲಿ ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

ಹೀಗೆ ಶೈಕ್ಷಣಿಕ ಬಡತನದ ಪರಿಕಲ್ಪನೆಯನ್ನು ಅದರ ಒಳನೋಟಗಳನ್ನು ಸಂಕೀರ್ಣತೆಯನ್ನು ಹಲವಾರು ಕತೆಗಳಲ್ಲಿ ವಿಶ್ಲೇಷಿಸಲಾಗಿದೆ.

# ಸಮಾರೋಪ

ಸಣ್ಣಕತೆಗಳ ಬಗ್ಗೆ ನಮ್ಮ ಆಧುನಿಕ ಸಾಹಿತ್ಯದಲ್ಲಿ ಅಧ್ಯಯನ ಮಾಡಹೊರಟರೆ ಅದಕ್ಕೆ ಕೊನೆಯೆಂಬುದಿಲ್ಲ. ಕನ್ನಡದಲ್ಲಿ ಸಾಕಷ್ಟು ಕತೆಗಳು ಬಂದಿವೆ. ಸಣ್ಣಕತೆಯ ಅಧ್ಯಯನವು ಸರಳವಾಗಿರುತ್ತದೆ. ಇದು ಹೆಚ್ಚು ಜನಪ್ರಿಯವಾದ ಪ್ರಕಾರ ಆದ್ದರಿಂದ ಆಧುನಿಕ ಆಯ್ದ ಸಣ್ಣಕತೆಗಳಲ್ಲಿ 'ಬಡತನದ ಪರಿಕಲ್ಪನೆ' ಎಂಬ ಶೀರ್ಷಿಕೆಯಡಿಯಲ್ಲಿ ಈ ಅಧ್ಯಯನ ಕಾರ್ಯವನ್ನು ಮಾಡಲಾಗಿದೆ.

ಈ ಅಧ್ಯಯನ ಕ್ರಮದಲ್ಲಿ ಒಂದು ವೈಶಿಷ್ಟ್ಯವನ್ನು ನಾವು ಕಾಣಬಹುದಾಗಿದೆ. ಅದೇನೆಂದರೆ ಈ ಪ್ರಬಂಧದಲ್ಲಿ ಸಣ್ಣಕತೆಗಳಲ್ಲಿ ಬಡತನದ ಪರಿಕಲ್ಪನೆ ಎಂದರೆ ಕೇವಲ ಬಡವರ ಜೀವನ ಚಿತ್ರಣವನ್ನು ಮಾತ್ರ ತರುವುದು ಸರ್ವೇಸಾಮಾನ್ಯವಾದುದು. ಆದರೆ ಇಲ್ಲಿ ಬಡತನದಲ್ಲಿ ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಎಂಬ ಮೂರು ಅಂಶಗಳನ್ನು ಉದ್ದೇಶವಾಗಿಟ್ಟುಕೊಂಡು ಪ್ರಬಂಧ ರಚಿಸಿರುವುದನ್ನು ನಾವು ಕಾಣಬಹುದಾಗಿದೆ.

ಆರ್ಥಿಕ ಬಡತನದಲ್ಲಿ ಹಲವಾರು ಕತೆಗಳಲ್ಲಿ ಬಡತನ ಪರಿಕಲ್ಪನೆಯನ್ನು ಕಾಣುತ್ತೇವೆ. ಆರ್ಥಿಕವಾಗಿ ಶೋಷಿತರಾಗುವಂತಹ ಜನರ ಜೀವನದ ಚಿತ್ರಣವನ್ನು ಕಾಣುತ್ತೇವೆ. ಹಸಿವು ಇಲ್ಲಿ ಪ್ರಮುಖ ವಸ್ತುವಾಗಿ ಬರುತ್ತದೆ. ಹಸಿವು ಆರ್ಥಿಕ ಬಡತನಕ್ಕೆ ಮತ್ತೊಂದು ರೀತಿಯಲ್ಲಿ ಕಾರಣವಾಗಿರುತ್ತದೆ. ವರ್ಗ ವರ್ಗಗಳ ನಡುವೆ ನಡೆಯುವ ಸಂಘರ್ಷದಲ್ಲಿ ಏನೂ ಅರಿಯದ ಮುಗ್ಧ ಜೀವಗಳನ್ನು ಆರ್ಥಿಕವಾಗಿ ಶೋಷಿಸಲಾಗುತ್ತದೆ. ಅವರ ಆಸ್ತಿಪಾಸ್ತಿಯನ್ನು ವಶಪಡಿಸಿಕೊಂಡು ಅವರನ್ನು ನಿರ್ಗತಿಕರನ್ನಾಗಿ

ಮಾಡುವಂತಹ ಪರಿಸ್ಥಿತಿಯನ್ನು ನಾವು ಕಾಣುತ್ತೇವೆ. ಇವುಗಳನ್ನು ಕತೆಗಾರರು ಕತೆಯ ವಸ್ತುವಾಗಿಸಿಕೊಂಡಿದ್ದಾರೆ. ಒಟ್ಟಿನಲ್ಲಿ ಆರ್ಥಿಕ ಬಡತನದಲ್ಲಿ ಕಟ್ಟೀಮನಿಯವರು, ನಿರಂಜನ, ಚದುರಂಗ, ಕೊರಡ್ಕಲ್ ಶ್ರೀನಿವಾಸರಾವ್, ಕುಂ. ವೀರಭದ್ರಪ್ಪರವರ ಕತೆಗಳನ್ನು ಇಟ್ಟುಕೊಂಡು ಆರ್ಥಿಕ ಬಡತನ ಎಂಬ ವಿಷಯವನ್ನು ವಿಸ್ತರಿಸುತ್ತಾ ಹೋಗಲಾಗಿದೆ. ಕನ್ನಡ ಕಥಾ ಸಾಹಿತ್ಯಕ್ಕೆ ಈ ಕತೆಗಳು ಒಂದು ಮಹತ್ವದ ಸ್ಥಾನವನ್ನು ಕೊಟ್ಟಿದ್ದಾವೆಂದು ಹೇಳಬಹುದಾಗಿದೆ.

ಬಡತನದ ಬಗ್ಗೆ ಕಂಡು ಬರುವ ಮತ್ತೊಂದು ಘಟಕವೆಂದರೆ ಸಾಂಸ್ಕೃತಿಕ ಬಡತನ ಇಲ್ಲಿ ಸಂಸ್ಕೃತಿ ಸಂಸ್ಕೃತಿಗಳ ನಡುವಿನ ಭಿನ್ನತೆಯಿಂದಾಗಿ ಉಂಟಾಗುವ ಸಾಂಸ್ಕೃತಿಕ ಬಡತನವನ್ನು ಕಾಣಬಹುದು. ಸಂಸ್ಕೃತಿಯ ಬಡತನದಲ್ಲಿ ಅನ್ಯ ಸಂಸ್ಕೃತಿಯ ಆಕ್ರಮಣದಿಂದಾಗಿ ಉಂಟಾಗುವಂತಹ ಪರಿಣಾಮಗಳನ್ನು ಕೆಲವೊಂದು ಕತೆಗಳಲ್ಲಿ ಕಾಣಬಹುದಾಗಿದೆ. ಸಂಸ್ಕೃತಿಯು ಅನ್ಯ ಸಂಸ್ಕೃತಿಗಳ ಪ್ರಭಾವಕ್ಕೆ ನಶಿಸಿಹೋಗುವಂತಹ ಸಂದರ್ಭಗಳು ಹೆಚ್ಚಾಗಿ ಕಂಡುಬರುತ್ತವೆ. ಅಂತಹ ಸಂಸ್ಕೃತಿಗಳು ತಲೆಯೆತ್ತುವುದು ಬಹಳ ಕಷ್ಟವಾಗುತ್ತವೆ. ಆ ವಿಷಯಗಳನ್ನು ಕತೆಯ ವಸ್ತುವಾಗಿಸಿಕೊಂಡು ಆಧುನಿಕ ಕತೆಗಳು ರಚನೆಗೊಂಡಿವೆ. ಸಾಂಸ್ಕೃತಿಕವಾಗಿ ಬಡವಾದ ಸಮಾಜದಲ್ಲಿನ ಪರಿಸ್ಥಿತಿ, ಇತರೆ ಸಂಸ್ಕೃತಿಯಿಂದಾಗಿ ಉಂಟಾಗುವಂತಹ ಪರಿಣಾಮವನ್ನು ಹಾಗೂ ವ್ಯಕ್ತಿ ವ್ಯಕ್ತಿಗಳ ನಡುವಿನ ಭಿನ್ನವಾದ ನಡವಳಿಕೆ ಕೂಡ ಇಲ್ಲಿ ಮುಖ್ಯವಾಗುತ್ತದೆ. ಆದ್ದರಿಂದ ಇಂತಹ ಕಡೆಯಲ್ಲಿ ಸಾಂಸ್ಕೃತಿಕ ಬಡತನದ ಪರಿಕಲ್ಪನೆಯನ್ನು ಗುರುತಿಸುವ ಕಾರ್ಯವನ್ನು ಮಾಡಲಾಗಿದೆ. ಇಲ್ಲಿ ಚಿತ್ತಾಲರು, ದೇಸಾಯಿ, ತೇಜಸ್ವಿ ಇವರ ಕತೆಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ನೋಡಲಾಗಿದೆ.

ಅನಂತರದಲ್ಲಿ ಕಂಡು ಬರುವುದು ಶೈಕ್ಷಣಿಕ ಬಡತನ, ಇಲ್ಲಿ ಸ್ತ್ರೀಕೇಂದ್ರಿತ ಕತೆಗಳಲ್ಲಿ ಹೇಗೆ ವ್ಯಕ್ತವಾಗಿದೆ ಎಂಬುದನ್ನು ನೋಡಲಾಗಿದೆ. ಶಿಕ್ಷಣವು ಬರೀ ಪುರುಷರಿಗೆ ಮಾತ್ರ ಸೀಮಿತವಾಗಿರುವುದು ಎಂಬ ಕಲ್ಪನೆ ನಮ್ಮ ಸಮಾಜದಲ್ಲಿ ಆದಿಯಿಂದಲೂ ಬಂದಂತಹ ಸಂಪ್ರದಾಯ, ಅವಳು ಕೇವಲ ನಾಲ್ಕು ಗೋಡೆಯ ಒಳಗೆ ಇರಬೇಕು ಎಂಬ ನಿರ್ಬಂಧವನ್ನು ಕಾಣುತ್ತೇವೆ. ಇದರಿಂದಾಗಿ ನಮ್ಮ ಹೆಣ್ಣುಮಕ್ಕಳು ಅನುಭವಿಸಿರುವ ನೋವು ಅಪಾರವಾದುದು. ಆದ್ದರಿಂದ ಇಂತಹ ಸಮಾಜದಲ್ಲಿ ಶಿಕ್ಷಣ ಅಭಾವ ಹೆಚ್ಚಾಗಿ ಕಾಣುವಂತಹ ಪ್ರಮುಖ ಅಂಶವಾಗಿದೆ. ಶಿಕ್ಷಣ ಜಾರಿಗೆ ಬಂದ ಅನಂತರದಲ್ಲಿ ಚಿಂತನೆ ಮಾಡುವ ಶಕ್ತಿ ಮಹಿಳೆಗೂ ಬಂದಿತು. ಹೆಣ್ಣಿನ ಶೋಷಣೆಯನ್ನು ತಡೆಯಲು ಹಲವಾರು ಲೇಖಕಿಯರು ಪ್ರಮುಖವಾಗಿ ಸಾರಾ, ವೈದೇಹಿ ಇಂತಹವರು ಸ್ತ್ರೀಜಗತ್ತಿನ ಒಳನೋಟವನ್ನು ಶಿಕ್ಷಣದ ಬಡತನವನ್ನು ಸಮಾಜಕ್ಕೆ ತಿಳಿಯಪಡಿಸಿದರು. ಶಿಕ್ಷಣ ಮಹಿಳೆಗೂ ಕಡ್ಡಾಯವಾಗಿ ನೀಡಬೇಕೆಂಬ ಧೋರಣೆಯನ್ನು ಇವರ ಕತೆಗಳಲ್ಲಿ ಕಾಣಲಾಗುತ್ತದೆ. ಶಿಕ್ಷಣ ಸಮಸ್ಯೆ ಹೆಣ್ಣಿಗಲ್ಲದೆ ಪುರುಷರು ಅವಿದ್ಯಾವಂತರಾಗಿ ಸಮಾಜದ ಕಟ್ಟುಪಾಡಿಗೆ ಒಳಗಾಗಿ ತಮ್ಮ ಜೀವನಕ್ಕೆ ಬಲಿಯಾಗಿಸುತ್ತಿದ್ದಾರೆ. ಇವುಗಳಿಗೆಲ್ಲಾ ಜ್ಞಾನ ಎಂಬ ದೀವಿಗೆ ಅಗತ್ಯ.

ಹೀಗೆ ಸಣ್ಣಕತೆಯಲ್ಲಿ ಬಡತನ ಎಂಬುದನ್ನು ಈ ಮೂರು ಹಂತದಲ್ಲಿ ವಿವರಿಸಲಾಗಿದೆ. ಇನ್ನೂ ಹಲವಾರು ಕತೆಗಳನ್ನು ವಿವರಿಸಬಹುದಿತ್ತು. ಆದರೆ ಪ್ರಬಂಧದ ದೃಷ್ಟಿಯಲ್ಲಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ಒಟ್ಟಿನಲ್ಲಿ ಆಧುನಿಕ ಸಾಹಿತ್ಯದ ಆಯ್ದ ಕತೆಗಳಲ್ಲಿ ಬಡತನದ ಪರಿಕಲ್ಪನೆ ಎಂಬ ವಿಷಯದ ಅಧ್ಯಯನವು ವಿಶಾಲವಾಗಿದೆ. ಆದರೆ ಇಲ್ಲಿ ಅದರ ಒಂದು ಭಾಗವನ್ನು ಮಾತ್ರ ವಿವರಿಸಲು ಸಾಧ್ಯವಾಗಿದೆ ಎಂಬುದಾಗಿ ಹೇಳಬಹುದು.

## ಕಥೆಗಾರರ ಪರಿಚಯ

**ಬಸವರಾಜ ಕಟ್ಟೀಮನಿ:**

ಜನನ 1919ರ ಅಕ್ಟೋಬರ್ 05ರಂದು ಬೆಳಗಾವಿ ಜಿಲ್ಲೆಯ ಗೋಕಾಕದ ಒಂದು ಹಳ್ಳಿ, ಮಲಾಮರಡಿಯಲ್ಲಿ ಕಟ್ಟೀಮನಿಯವರ ಬದುಕು ಪತ್ರಿಕೋದ್ಯಮದ ಮೂಲಕ ಆರಂಭವಾಯಿತು. ಆಗಸ್ಟ್ 1947ರಲ್ಲಿ ನಡೆದ ಚಳುವಳಿಯಲ್ಲಿ ಭಾಗವಹಿಸಿ ಸೆರೆವಾಸ ಅನುಭವಿಸಿದರು. ಈ ವೇಳೆಗಾಗಲೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಾರಂಭವಾಗಿದ್ದ ಪ್ರಗತಿಶೀಲ ಚಳುವಳಿಗೆ ಇದರಿಂದ ಒಂದು ಖಚಿತ ಮಹತ್ವ ಬಂದಿತು ಎಂದು ಹೇಳಬಹುದು. ಇವರ ಮೊದಲ ಕೃತಿ ಕಾರವಾನ್ (ಕಥಾ ಸಂಕಲನ) 1944ರಲ್ಲಿ ಪ್ರಕಟವಾಯಿತು. ಸುಂಟರಗಾಳಿ, ಸೈನಿಕನ ಹೆಂಡತಿ, ಸೆರೆಯಿಂದ ಹೊರಗೆ, ಹುಲಿಯಣ್ಣನ ಮಗಳು, ಆಗಸ್ಟ್ ಒಂಭತ್ತು, ಗುಲಾಬಿ ಹೂ ಇತ್ಯಾದಿ ಇವರ ಇತರ ಕಥಾ ಸಂಕಲನಗಳು. ನಾಟಕ :'ಪಟ್ಟಣದ ಹುಡುಗಿ, ಕಾದಂಬರಿ: ಸ್ವತಂತ್ರ್ಯದೆಡೆಗೆ, ಮಾಡಿ ಮಡಿದವರು, ಮೋಹದ ಬಲೆಯಲ್ಲಿ, ಖಾನಾವಳಿಯ ನೀಲಾ, ನೀನನ್ನ ಮುಟ್ಟಬೇಡ, ಜನಿವಾರ ಮತ್ತು ಶಿವದಾರ, ದ್ರೋಹಿ, ಗೆಳೆಯನ ಮಡದಿ, ಸಾಕ್ಷಾತ್ಕಾರ, ಕತ್ತರಿ ಪ್ರಯೋಗ, ಪಾತರಗಿತ್ತಿ, ಚಕ್ರವ್ಯೂಹ ಮುಂತಾದವು.

ಕವಿತೆ: ಕಂಪೋಜಿಟರ್ ಮತ್ತು ಸ್ವತಂತ್ರವ್ವ, ಪ್ರವಾಸ ಕಥನ, ನಾನು ಕಂಡ ರಶಿಯಾ, ಮಕ್ಕಳ ಸಾಹಿತ್ಯ: ಸಂಗೊಳ್ಳಿ ರಾಯಣ್ಣ, ಕುಮಾರ ರಾಮ, ಆತ್ಮಕತೆ: ಕಾದಂಬರಿಕಾರನ ಬದುಕು, ಜೀವನ ಚರಿತ್ರೆ: ಸೇನಾಪತಿ, ಚೆನ್ನಪ್ಪವಾಲಿ, ಸಂಪಾದನೆ: ನವಿಲೂರ ಮನೆಯಿಂದ, ರಸಿಕರಂಗ ದರ್ಶನ ಇವರ ಕೃತಿಗಳಾಗಿವೆ.

**ನಿರಂಜನ:**

'ಮೃತ್ಯುಂಜಯ' ಎಂದ ಕೂಡಲೇ ನೆನಪಾಗುವುದು 'ನಿರಂಜನ' ಎಂಬ ಹೆಸರು. ಇವರು ಹುಟ್ಟಿದ್ದು 1924ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನ ಕುಳಕುಂದದಲ್ಲಿ. ಇವರು ಪತ್ರಕರ್ತರಾಗಿ ದುಡಿಮೆ ಮಾಡಿದ್ದಾರೆ. ಚಿರಸ್ಮರಣೆ, ವಿಮೋಚನೆ, ಮೃತ್ಯುಂಜಯ ಮೊದಲಾದ ಕಾದಂಬರಿಗಳನ್ನು ಅನೇಕ ಸಣ್ಣಕತೆಗಳನ್ನು, ಅಂಕಣ ಬರಹಗಳನ್ನು ನಾಟಕಗಳನ್ನು ರಚಿಸಿದ್ದಾರೆ.

**ಚದುರಂಗ:**

ಮೈಸೂರು ಜಿಲ್ಲೆಯ ಕಲ್ಲಹಳ್ಳಿಯಲ್ಲಿ ಅರಸು ಮನೆತನದಲ್ಲಿ ಹುಟ್ಟಿ ಕಷ್ಟ ಪರಂಪರೆಯನ್ನು ತಮ್ಮ ಬದುಕಿನ ಆದರ್ಶವನ್ನಾಗಿ ಸ್ವೀಕರಿಸಿ, ಕಷ್ಟದ ಹಾದಿಯನ್ನು ಸರಳವಾಗಿ ಆರಿಸಿಕೊಂಡು ಬದುಕಿದ್ದ ಬಹುದೊಡ್ಡ ಲೇಖಕರು ಚದುರಂಗರು. ಇವರ ಕೃತಿಗಳಾವುವೆಂದರೆ:

**ಕಥಾ ಸಂಗ್ರಹಗಳು:** ಸ್ವಪ್ನ ಸುಂದರಿ (1946), ಶವದ ಮನೆ (1948), ಇಣುಕು ನೋಟ (1949), ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ (1951), ಮೀನಿನ ಹೆಜ್ಜೆ (1958), ಕ್ಯಾಟೆ (1992), ಮೃಗಯಾ (1994), ಚದುರಂಗರ ಸಮಗ್ರ ಕಥೆಗಳು (1999).

**ಕಾದಂಬರಿಗಳು:** ಸರ್ವಮಂಗಳಾ (1950), ಉಯ್ಯಾಲೆ (1960), ವೈಶಾಖ (1981), ಹೆಜ್ಜಾಲ (1998). **ನಾಟಕಗಳು:** ಕುಮಾರ ರಾಮ (1966), ಇಲಿಬೋನು (1972), ಬಿಂಬ (1990) ಹನಿಗವನ: ಅಲೆಗಳು, ವೈಶಾಖಕ್ಕೆ ಕೇಂದ್ರ ಸಾಹಿತಿ ಅಕಾಡೆಮಿ ಪ್ರಶಸ್ತಿ, ಮೈಸೂರು ವಿ.ವಿ. ಡಾಕ್ಟರೇಟ್ ಪದವಿ ದೊರೆತಿದೆ.

**ಯಶವಂತ ಚಿತ್ತಾಲ:**

ಉ. ಕನ್ನಡ ಜಿಲ್ಲೆಯ ಗೋಕರ್ಣ ತಾಲ್ಲೂಕಿನ ಹನೇಹಳ್ಳಿಯವರಾದ ಯಶವಂತ ಚಿತ್ತಾಲರ ಕೊಂಕಣಿ ಮಾತೃಭಾಷೆಯಾಗಿದ್ದರೂ ಕನ್ನಡಕ್ಕೆ ಸಲ್ಲಿಸಿದ ಸೇವೆ ಅಪಾರ. ನವ್ಯ ಸಾಹಿತಿಯಾಗಿದ್ದಾರೆ.

**ಕೃತಿಗಳು:** ಕಥಾ ಸಂಗ್ರಹಗಳು, ಸಂದರ್ಶನ (1959), ಆಬೋಲೀನ (1960), ಆಟ (1969), ಕತೆಯಾದಳು ಹುಡುಗಿ (1980), ಬೇನ್ಯಾ (1983), ಸಿದ್ಧಾರ್ಥ (1953), ಕುಮಟೆಗೆ ಬಂದ ಕಿಂದರಿ ಜೋಗಿ (1997), ಓಡಿ ಹೋದಾ ಮುಟ್ಟೆ ಬಂದಾ (2001), ಚಿತ್ತಾಲರ ಕತೆಗಳು (1983), ಐವತ್ತೊಂದು ಕತೆಗಳು (2000).

**ಕಾದಂಬರಿ:** ಮೂರು ದಾರಿಗಳು (1964), ಶಿಕಾರಿ (1979), ಛೇದ (1985), ಪುರುಷೋತ್ತಮ (1990), ಕೇಂದ್ರ ವೃತ್ತಾಂತ (1992)

**ಪ್ರಬಂಧ:** ಸಾಹಿತ್ಯ, ಸೃಜನಶೀಲತೆ ಮತ್ತು ನಾನು (1981), ಕತೆಯಾದಳು ಹುಡುಗಿಗೆ 1983ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1983ರ ವರ್ಧಮಾನ ಪ್ರಶಸ್ತಿ, 1993ರ ಮಾಸ್ತಿ ಪ್ರಶಸ್ತಿ, 1998ರ ಶಿವರಾಮ ಕಾರಂತ ಪ್ರಶಸ್ತಿ ದೊರತಿದೆ.

**ಶಾಂತಿನಾಥ ದೇಸಾಯಿ:**

ಕಾರವಾರ ಜಿಲ್ಲೆ ಹಳಿಯಾಳ ತಾಲ್ಲೂಕು ಹವಗಿಯವರಾದ ಶಾಂತಿನಾಥ ಕೆ. ದೇಸಾಯಿಯವರು ನವ್ಯ ಸಾಹಿತ್ಯದ ಮುಖ್ಯ ಕತೆಗಾರರು. 1988-1991ರಲ್ಲಿ ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದರು.

**ಕೃತಿಗಳು:** ಕಥಾ ಸಂಗ್ರಹಗಳು: ಮಂಜುಗಡ್ಡೆ (1959), ಕ್ಷಿತಿಜ (1966), ದಂಡೆ (1971), ರಾಕ್ಷಸ (1977), ಪರಿವರ್ತನೆ 91984), ಕೂರ್ಮಾವತಾರ (1988), ಸಮಗ್ರ ಕತೆಗಳು (2001). ಕಾದಂಬರಿ: ಮುಕ್ತಿ (1961), ವಿಕ್ಷೇಪ (1971), ಸೃಷ್ಟಿ (1979), ಬೀಜ (1981), ಸಂಬಂಧ (1981), ಅಂತರಾಳ (1993), ಓಂಣಮೋ (1998), ವಿಮರ್ಶೆ: ಸಾಹಿತ್ಯ ಮತ್ತು ಭಾಷೆ (1980), ನವ್ಯ ಸಾಹಿತ್ಯ ದರ್ಶನ (1989), ಕನ್ನಡ ಕಾದಂಬರಿ ನಡೆದು ಬಂದ ರೀತಿ (1989). ಪ್ರಶಸ್ತಿಗಳು: ಓಂಣಮೋ ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (1999), ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಇತ್ಯಾದಿಗಳು.

**ಪೂರ್ಣಚಂದ್ರ ತೇಜಸ್ವಿ:**

ಜನನ 1938ರಲ್ಲಿ ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿಯಲ್ಲಿ ತೇಜಸ್ವಿಯವರು ನವ್ಯ ಸಾಹಿತ್ಯ ಉತ್ಕರ್ಷ ಸ್ಥಿತಿಯಲ್ಲಿದ್ದ ಕಾಲದಿಂದ ಬಂಡಾಯದ ಕಾಲಾವಧಿಯಲ್ಲಿ ಔದ್ಯಮಿಕ ಅವಿಷ್ಕಾರ, ಪ್ರಗತಿಪರ ಆಸ್ಫೋಟನೆಯ ಹಿನ್ನೆಲೆಯಲ್ಲಿ ಸಮಾಜದ ನಿರ್ವೀರ್ಯ ಮೌಲ್ಯಗಳ ಪರಿಸರದಲ್ಲಿ ಅನನ್ಯ ಸಾಹಿತ್ಯ ಕಲೆಗಾರರಾಗಿ ಬೆಳೆದರು. ಇವರ **ಕೃತಿಗಳು:** ಕಥೆ: ಹುಲಿಯೂರಿನ ಸರಹದ್ದು (1962), ಅಬಚೂರಿನ ಪೋಸ್ಟಾಫೀಸು(1971), ಕಿರಗೂರಿನ ಗಯ್ಯಾಳಿಗಳು (1991), ಕಾದಂಬರಿ ಸ್ವರೂಪ (1966), ನಿಗೂಢ ಮನುಷ್ಯರು (1976), ನಾಟಕ: ಯಮಳ ಪ್ರಶ್ನೆ (1964), ಕಾವ್ಯ: ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು (1962), ಪ್ರಬಂಧ: ವ್ಯಕ್ತಿ ವಿಶಿಷ್ಟ ಸಿದ್ಧಾಂತ (1964), ಅಣ್ಣನ ನೆನಪು (1996), ಪ್ರವಾಸ ಕಥನ: ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್ (1990). ಭಾರತೀಯ ಭಾಷಾ

ಪ್ರಶಸ್ತಿ (1989), ಪಂಪ ಪ್ರಶಸ್ತಿ (2001) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (1987), ಅಬಚೂರಿನ ಪೋಸ್ಟಾಫೀಸು, ತಬರನ ಕತೆ, ಮತ್ತು ಕುಬಿ ಮತ್ತು ಇಯಾಲಗಳು ಚಲನಚಿತ್ರಗಳಾಗಿ ಯಶಸ್ವಿಯಾಗಿವೆ.

**ದೇವನೂರು ಮಹಾದೇವ:**

1948ರಲ್ಲಿ ಹುಟ್ಟಿದ ಮಹಾದೇವ ಅವರು ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೋಕಿನ ದೇವನೂರಿನವರು. 1975 ರಿಂದ 1989ರವರೆಗೆ ಮೈಸೂರಿನ ಭಾರತೀಯ ಭಾಷಾ ಸಂಸ್ಥೆಯಲ್ಲಿ ಕೆಲಕಾಲ ಕೆಲಸ ಮಾಡಿ ಈಗ ವ್ಯವಸಾಯದಲ್ಲಿ ತೊಡಗಿ, ಮೈಸೂರಿನಲ್ಲಿ ನೆಲೆಸಿದ್ದಾರೆ. ಇವರ ಪ್ರಸಿದ್ಧ ಕೃತಿಗಳೆಂದರೆ ಕಥೆ: ದ್ಯಾವನೂರು (1973), ಕಾದಂಬರಿ: ಒಡಲಾಳ (1981), ಕುಸುಮಬಾಲೆ (1988), ವಿಚಾರ: ನೋಡು ಮತ್ತು ಕೊಡು, ದೇವನೂರು ಮಹಾದೇವ ಅವರ ಕೃತಿಗಳು (1992), ಒಡಲಾಳಕ್ಕೆ 1984ರ ಭಿಲಹಾರ ಪ್ರಶಸ್ತಿ, 1984ರ ಭಾರತೀಯ ಭಾಷಾ ಪ್ರಶಸ್ತಿ, ಕುಸುಮ ಬಾಲೆಗೆ 1991ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (1995) ರಾಜ್ಯೋತ್ಸವ ಪ್ರಶಸ್ತಿ ದೊರೆತಿದೆ.

**ಕುಂ. ವೀರಭದ್ರಪ್ಪ:**

ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕುಂ. ವೀರಭದ್ರಪ್ಪನವರ ಸಾಹಿತ್ಯ ಕೃಷಿ ಬಹಳ ವಿಶಿಷ್ಟವಾದುದು. ಬಳ್ಳಾರಿ ಜಿಲ್ಲೆಯ ಕೊಟ್ಟೂರಿನವರಾದ ವೀರಭದ್ರಪ್ಪನವರು ಸಾಹಿತ್ಯ ಕ್ಷೇತ್ರಕ್ಕೆ ಕುಂವೀ ಎಂದೇ ಪ್ರಸಿದ್ಧರು. ಇವರ ಕೃತಿಗಳೆಂದರೆ: ಕಥೆ: ಇನ್ನಾದರೂ ಸಾಯಬೇಕು (1982), ಡೋಮ ಮತ್ತಿತರ ಕಥೆಗಳು (1985), ಭಗವತಿ ಕಾಡು (1990), ನಿಜಲಿಂಗ (1994), ಸೋಲ ಎಂಬ ಸಾಯಿಯೂ

ವಾಗಿಲಿ ಎಂಬ ಗ್ರಾಮವೂ (1995), ಅಪೂರ್ವ ಚಿಂತಾಮಣಿ ಕಥೆ (1995), ಭಳಾರೆ ವಿಚಿತ್ರಂ (2002), ಕಡಿವೇಮಲ (2001), ಕಾದಂಬರಿ: ಕಪ್ಪು (1981), ಬೇಲಿ ಮತ್ತು ಹೊಲ (1982), ಆಸ್ತಿ (1983), ಕೆಂಡದ ಮಳೆ (1986), ಬೇಟೆ (1986), ಪಕ್ಷಿಗಳು (1989), ಪ್ರತಿದ್ವಂದ್ವಿ (1987), ಕೊಟ್ರ ಹೈಸ್ಕೂಲಿಗೆ ಸೇರಿದ್ದು (1992), ಹನುಮ (1996), ಶಾಮಣ್ಣ(1998), ಯಾಪಿಲ್ಲು (2001), ಕಾವ್ಯ: ದಿವಿ ಸೀಮೆಯ ಹಾಡು (1978), ಬೇಲಿಯ ಹೂಗಳು (1987), ಜೀವನ ಚರಿತ್ರೆ -ರಾಹುಲ ಸಾಂಕೃತ್ಯಾಯನ (1994), ಚಾರ್ಲಿಚಾಪ್ಲಿನ್ (2000), ಸುಭದ್ರಮ್ಮ ಮನ್ಸೂರ(2000), ಪ್ರಶಸ್ತಿಗಳು: ಕಪ್ಪು ಕಾದಂಬರಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ, ಭಗತಿ ಕಾಡು ಸಂಗ್ರಹಕ್ಕೆ ಮುದ್ದಣ ರತ್ನಾಕರ ವರ್ಣಿ ಪ್ರಶಸ್ತಿ ದೊರೆತಿದೆ.

**ಪಿ. ಲಂಕೇಶ್:**

ಪಿ. ಲಂಕೇಶ್ ನವ್ಯ ಸಾಹಿತ್ಯದ ಪ್ರಮುಖ ಕವಿ. ಕತೆಗಾರ, ಕಾದಂಬರಿಕಾರ, ಹಾಗೂ ವಿಮರ್ಶಕರು.

**ಕೃತಿಗಳು: ಕತೆ:** ಕೆರೆಯ ನೀರನು ಕೆರೆಗೆ ಚೆಲ್ಲಿ (1969), ನಾನಲ್ಲ (1970), ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ (1973), ಕಲ್ಲುಕರಗುವ ಸಮಯ (1990), ಉಲ್ಲಂಘಟನೆ (1996), ಸಮಗ್ರ ಕಥೆಗಳು (1992), ಕಾದಂಬರಿ: ಬಿರುಕು (1967), ನಾಟಕ: 7 ನಾಟಕಗಳು (1971), ಸಂಕ್ರಾಂತಿ (1971), ಗುಣಮುಖ (1993), ದೊರೆ ಈಡಿಪಸ್ (ಅನುವಾದ), ಅಂತಿಗೊನೆ (ಅನುವಾದ)(1971), ಕಾವ್ಯ: ಬಿಚಲಚು (1967), ತಲೆಮಾರು, ಪಾಪದ ಹೂಗಳು (ಅನವಾದ - 1974), ವಿಚಾರ-ವಿಮರ್ಶೆ, ಪ್ರಸ್ತುತ (1970), ಕಂಡದ್ದು ಕಂಡಹಾಗೆ, ಟೀಕೆ ಟಿಪ್ಪಣಿ (1991), ಆತ್ಮಕಥನ-ಹುಳಿಮಾವಿನ ಮರ

(1997)(ಸಂ.), ಅಕ್ಷರ ಹೊಸ ಕಾವ್ಯ (1970), ಕಲ್ಲುಕರಗುವ ಸಮಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1986), 'ಪಲ್ಲವಿ' ಚಲನಚಿತ್ರಕ್ಕೆ ರಾಷ್ಟ್ರಪ್ರಶಸ್ತಿ ದೊರೆತಿದೆ.

**ಕೊರಡ್ಕಲ್ ಶ್ರೀನಿವಾಸರಾವ್: (1895-1948)**

ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ಸಮೀಪದ ಕೊರಡ್ಕಲ್ ಗ್ರಾಮದಲ್ಲಿ ಜನನ: ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಕೃತಿಗಳು: ನಂದಾ ದೀಪ, ಕಥೆಗಳು: ಪದ್ಯಾವಳಿ, ಕಥನ ಕವನ: ಆರೋಗ್ಯ ಪ್ರತಾಪ, ನಾಟಕ: ಭಾರತೀಯ ಕಥೆಗಳು, ಬಾಲವಾಙ್ಮಯ, ವಿಮರ್ಶೆ ಇತ್ಯಾದಿಗಳು.

**ವೈದೇಹಿ:**

ಬಿ.ಕಾಂ.ವರೆಗೆ ಶಿಕ್ಷಣ ಮಾಡಿ ಕಾವ್ಯ, ಕಥೆ, ಕಾದಂಬರಿ, ನಾಟಕ, ಪ್ರಬಂಧ, ಮಕ್ಕಳ ಸಾಹಿತ್ಯ ಈ ಎಲ್ಲಾ ಪ್ರಕಾರಗಳಲ್ಲಿಯೂ ಕೃತಿ ರಚನೆ ಮಾಡಿದ್ದಾರೆ. ಕಥಾ ಸಂಗ್ರಹಗಳು: ಮರಗಿಡ ಬಳ್ಳಿ (1979), ಅಂತರಂಗದ ಪುಟಗಳು (1984), ಗೋಲ (1986), ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ (1991), ಅಮ್ಮಚ್ಚಿಯೆಂಬ ನೆನಪು (2000), ಕಾವ್ಯ: ಬಿಂದು ಬಿಂದಿಗೆ (1990), ಪಾರಿಜಾತ (1979), ಗಗನಚುಕ್ಕಿ, ಕಾದಂಬರಿ: ಅಸ್ಪೃಶ್ಯರು (1992), ಪ್ರಬಂಧ ಮಲ್ಲಿನಾಥನ ಧ್ಯಾನ (1996), ಜಾತ್ರೆ (1998), ಹಲವಾರು ಅನುವಾದಗಳು. ಮಕ್ಕಳ ನಾಟಕಗಳು: ನೆನಪು ಜೀವನ ಚರಿತ್ರೆ, ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ (2004), ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು (1985), ಸೇಡಿಯಾಪು ನೆನಪುಗಳು (1994), ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ (1998), ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ದೊರೆತಿದೆ.

**ಸಾರಾ ಅಬೂಬಕ್ಕರ್: (1936)**

ಕೇರಳದ ಕಾಸರಗೋಡಿನಲ್ಲಿ 30-06-1936ರಲ್ಲಿ ಜನಿಸಿದ್ದಾರೆ. ಕೃತಿಗಳು: ಚಂದ್ರಗಿರಿ ತೀರದಲ್ಲಿ, ಸಹನಾ, ವಜ್ರಗಳು, ಕಾದಂಬರಿಗಳು: ಚಪ್ಪಲಿಗಳು, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು, ಕಥೆಗಳು ಇತ್ಯಾದಿ ಇವರ ಕೃತಿಗಳು.

# ಅನುಬಂಧ

| ಕಥೆಗಾರರು | ಕಥಾ ಸಂಕಲನ | ಮುದ್ರಣಗೊಂಡ ವರ್ಷ | ಪ್ರಕಾಶಕರು |
|---|---|---|---|
| 1. ಅಮೂರ. ಜಿ.ಎಸ್ | ಸ್ವಾತಂತ್ರ್ಯೋತ್ತರ ಕನ್ನಡ ಕಥಾಲೋಕ | 2004 | ಅಂಕಿತ ಪುಸ್ತಕ, ಬೆಂಗಳೂರು |
| 2. ಅಮೂರ. ಜಿ.ಎಸ್. | ಕನ್ನಡ ಕಥನ ಸಾಹಿತ್ಯ, ಸಣ್ಣಕತೆ | 2003 | ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು |
| 3. ಅಮೂರ. ಜಿ.ಎಸ್. | ಅವಳ ಕತೆಗಳು | 1999 | ಪ್ರಿಸಂ ಪ್ರಕಾಶನ |
| 4. ಡಾ. ಆರ್ಯಾಂಬ ಪಟ್ಟಾಭಿರಾಮ | ಮಹಿಳಾ ಸಾಹಿತ್ಯ ಸಮೀಕ್ಷೆ | --- | ---- |
| 5. ಕುವೆಂಪು | ನನ್ನ ದೇವರು ಮತ್ತು ಇತರ ಕಥೆಗಳು | 2004 | ಉದಯರವಿ ಪ್ರಕಾಶನ, ಮೈಸೂರು |
| 6. ಕುವೆಂಪು | ಸನ್ಯಾಸಿ ಮತ್ತು ಇತರ ಕಥೆಗಳು | 2005 | ಉದಯರವಿ ಪ್ರಕಾಶನ, ಮೈಸೂರು |
| 7. ಕುಂ.ವೀ. | ಇನ್ನಾದರೂ ಸಾಯಬೇಕು | 1983 | ಯುವಕರ ಸಂಘ, ಹರಿಗಬೊಮ್ಮನ ಹಳ್ಳಿ |
| 8. ಕುಂ.ವೀ. | ಡೋಮ ಮತ್ತು ಮತ್ತಿತರ ಕಥೆಗಳು | 1983 | ಅನನ್ಯ ಪ್ರಕಾಶನ, ಧಾರವಾಡ |
| 9. ಕುಂ.ವೀ. | ಆಯ್ದ ಕತೆಗಳು | 1994 | ಸಂವಹನ ಪ್ರಕಾಶನ, ಮೈಸೂರು |
| 10. ಕಾಳೇಗೌಡ ನಾಗವಾರ | ಜೀವನ ಪ್ರೇಮ | 2005 | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು |

| | | | | |
|---|---|---|---|---|
| 11. | ಕೀರ್ತಿನಾಥ ಕುರ್ತಕೋಟಿ | ಯುಗಧರ್ಮ ಹಾಗೂ ಸಾಹಿತ್ಯ ದರ್ಶನ | 1990 | ಮನೋಹರ ಗ್ರಂಥಮಾಲಾ, ಧಾರವಾಡ |
| 12. | ಡಾ.ಎನ್.ಕೆ. ಕೋದಂಡ ರಾಮ | ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ | 2002 | --- |
| 13. | ಗಿರಡ್ಡಿ ಗೋವಿಂದರಾಜ (ಸಂಪಾದಕರು) | ಕುಂ.ವೀ. ಅವರ ಕಥಾ ಸಾಹಿತ್ಯ | 2001 | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು |
| 14. | ಚದುರಂಗ | ಚದುರಂಗರ ಸಮಗ್ರ ಕಥೆಗಳು | 1999 | ಅಭಿರುಚಿ ಪ್ರಕಾಶನ, ಮೈಸೂರು |
| 15. | ಚಂದ್ರಿಕಾ. ಪಿ. | ಯಾರ ಜಪ್ತಿಗೂ ಸಿಗದ ನವಿಲುಗಳು | 1999 | ಅಭಿನವ ಪ್ರಕಾಶನ, ಬೆಂಗಳೂರು |
| 16. | ದೇವನೂರು ಮಹಾದೇವ | ದೇವನೂರ ಮಹಾದೇವ ಅವರ ಕೃತಿಗಳು | 1997 | ಪತ್ರಿಕೆ ಪ್ರಕಾಶನ, ಬೆಂಗಳೂರು |
| 17. | ಪೂರ್ಣಚಂದ್ರ ತೇಜಸ್ವಿ | ತೇಜಸ್ವಿಯವರ ಎಲ್ಲ ಕತೆಗಳು | 1983 | ಪತ್ರಿಕೆ ಪ್ರಕಾಶನ, ಬೆಂಗಳೂರು |
| 18. | ಬಸವರಾಜ ಕಟ್ಟೀಮನಿ | ಕಾರವಾನ್ | 1943 | ಶಾರದಾ ಪ್ರಕಟನಾಲಯ, ಬೆಂಗಳೂರು |
| 19. | ಬಸವರಾಜ ಕಟ್ಟೀಮನಿ | ಸೆರೆಯಿಂದ ಹೊರಗೆ | 1949 | ಶಾರದಾ ಪ್ರಕಟನಾಲಯ, ಬೆಂಗಳೂರು |
| 20. | ಬೋಳೂರು ಮಹಮ್ಮದ್ ಕುಂಞ | ಶತಮಾನದ ಸಣ್ಣಕತೆ | ---- | ---- |

| | | | |
|---|---|---|---|
| 21. ಯಶವಂತ ಚಿತ್ತಾಲರು | ಐವತ್ತೊಂದು ಕತೆಗಳು | 2000 | ಗೀತಾ ಬುಕ್ ಹೌಸ್, ಬೆಂಗಳೂರು |
| 22. ಪಿ. ಲಂಕೇಶ್ | ಕಲ್ಲುಕರಗುವ ಸಮಯ | ---- | ---- |
| 23. ವೈದೇಹಿ | ಅಂತರಂಗದ ಪುಟಗಳು | 1984 | ಅಕ್ಷರ ಪ್ರಕಾಶನ, ಸಾಗರ |
| 24. ವೈದೇಹಿ | ಕ್ರೌಂಚ ಪಕ್ಷಿಗಳು | 2005 | ಅಕ್ಷರ ಪ್ರಕಾಶನ, ಸಾಗರ |
| 25. ಶಾಂತಿನಾಥ ದೇಸಾಯಿ | ಸಮಗ್ರ ಕತೆಗಳು | 2001 | ಸಪ್ನ ಬುಕ್ ಹೌಸ್, ಬೆಂಗಳೂರು |
| 26. ಸಾರಾ ಅಬೂಬಕ್ಕರ್ | ಚಪ್ಪಲಿಗಳು | 1989 | ನವಕರ್ನಾಟಕ, ಬೆಂಗಳೂರು |
| 27. ಸಂಪಾದನ ಕೃತಿ | ಸಣ್ಣಕತೆಗಳು | 2000 | ಪ್ರಸಾರಾಂಗ ಮತ್ತು ಮೈಸೂರು ವಿಶ್ವವಿದ್ಯಾನಿಲಯ |



